# ಪಡುವಣ

(ಜೀವನ ಚಿತ್ರಗಳು)



ಪ. ಸು. ಭಟ್ಟ, ಶಿರಶಿ



೧೯೪೪

ಪರ್ಣಕುಟಿ ಗ್ರಂಥಮಾಲೆ ಗೋಕರ್ಣ

ಮಾರಾಟಗಾರರು:

**ಎಲ್. ಜಿ. ಭಟ್ಟ, ನೀಲಗಿರಿ ಟೀ ಡಿಪೊ, ಶಿರಶಿ. (ಉ. ಕನ್ನಡ)**



ಧಾರವಾಡದಲ್ಲಿ ಪುಸ್ತಕ ಸಿಗುವ ಸ್ಥಳ

**ಸಮಾಜ ಪುಸ್ತಕಾಲಯ, ಧಾರವಾಡ**









೧೯೪೮

**ಬೆಲೆ: ೧೦ ಆಣೆ**

ಮುದ್ರಕರು ಮತ್ತು ಪ್ರಕಾಶಕರು

ಎಚ್. ಬಿ. ನವಲೂರ, ಹಿಂದಮಾತಾ ಮುದ್ರಣಾಲಯ, ಧಾರವಾಡ

# ಪರಿಚಯ

ಸೃಷ್ಟಿಸೌಂದರ್ಯ ತವರೂರಾಗಿ ಮೆರೆಯುತ್ತಿರುವ ಉತ್ತರಕನ್ನಡ ಕರ್ನಾಟಕದಲ್ಲಿ ಇಂದು ಅತ್ಯಂತ ಹಿಂದುಳಿದ ಜಿಲ್ಲೆಯಾಗಿ ಎಲ್ಲರಿಗೂ ಅಪರಿಚಿತವಾಗಿದೆ. ಇಲ್ಲಿನ ಜನಜೀವನವನ್ನು ಕನ್ನಡಿಗರು ಅರಿತುಕೊಂಡಿಲ್ಲ. ಅರಿತುಕೊಳ್ಳುವದು ಅವಶ್ಯವಿದೆ. ಈ ಕೊರತೆಯನ್ನು ಮನಗಂಡು ಶ್ರೀ. ವಿ.ಜಿ. ಭಟ್ಟರು ಈಗಾಗಲೇ ಜಿಲ್ಲೆಯ ಜನಜೀವನವನ್ನು ಚಿತ್ರಿಸುವ ಎರಡು ಪುಸ್ತಕಗಳನ್ನು ಬರೆದಿದ್ದಾರೆ. ಅದೇ ದಾರಿಯಲ್ಲಿ ಗೆಳೆಯ ಪ. ಸು. ಭಟ್ಟರು ಕೂಡ ನಮ್ಮ ಜಿಲ್ಲೆಯ ಜನಜೀವನವನ್ನು ಚಿತ್ರಿಸುವ ಹನ್ನೆರಡು ಚಿತ್ರಗಳನ್ನು ಓದುಗರ ಮುಂದಿಡಿಸಿದ್ದಾರೆ.

ಗೆಳೆಯ ಪ. ಸು ಕನ್ನಡ ಸಾಹಿತ್ಯದಲ್ಲಿ ಹೆಸರು ಗಳಿಸಿದ್ದಾರೆ. ಇವರ ಅನೇಕ ಕಥೆ, ಲೇಖನಗಳು ಕನ್ನಡದ ಅನೇಕ ಪತ್ರಿಕೆಗಳಲ್ಲಿ ಪ್ರಕಟವಾಗಿ ಜನರ ಪ್ರೀತಿ ಗಳಿಸಿದೆ. ಗೆಳೆಯ ಪ. ಸುರವರ "ಹಕ್ಕಿನ ಹೋರಾಟ"ವೆಂಬ ಕಥಾ ಸಂಗ್ರಹವು ಕೂಡ ಪ್ರಕಟವಾಗಲಿದೆ. ಇವರು ಇನ್ನೂ ವಿದ್ಯಾರ್ಥಿ ದೆಸೆಯಲ್ಲೇ ಇದ್ದಾರೆ. ಅಭ್ಯಾಸ ಮಾಡಿ ಉಳಿದ ವೇಳೆಯಲ್ಲಿ ಸಾಹಿತ್ಯಸೇವೆ ಮಾಡಬೇಕಾಗುವದು. ಆದರಿಂದ ಇವರು ಸಣ್ಣ ಕತೆಗಳನ್ನೇ ಸುಂದರವಾಗಿ ಬರೆಯಲು ಯತ್ನಿಸುತ್ತಿದ್ದಾರೆ.

ಪಡುವಣದ ಹನ್ನೆರಡು ಚಿತ್ರಗಳು ಜಿಲ್ಲೆಯ ಜನಜೀವನವನ್ನು ಪ್ರತಿಬಿಂಬಿಸುತ್ತದೆ. ಅದರಿಂದಾಗಿ ನಮ್ಮಲ್ಲಿನ ಮಾತುಗಳೇ ಹೆಚ್ಚು ಬಂದು ಚಿತ್ರಕ್ಕೆ ಕಳೆ ಬಂದಿದೆ. ಘಟ್ಟದ ಕೆಳಗೆ ನಡೆಯುವ ಬೆಚ್ಚಿನ ಸಂಕ್ರಾಂತಿ, ಸುಗ್ಗಿಯ ಕುಣಿತ, ಕಥೆಯೊಡನೆ ಬೆರೆತು ಸುಂದರವಾಗಿ ಚಿತ್ರಿತವಾಗಿದೆ. ಅಂಧಶ್ರದ್ಧೆಗಳಿಂದ, ದೇವರಲ್ಲಿ ಅನನ್ಯಭಕ್ತಿ ಇರುವ ಜನರ ಚಿತ್ರಣ ಸಪ್ಪರತಿ ಕಲ್ಲು, ಬಾಗಿಲ ಜಟಿಗಗಳಿಂದ ಕಂಡುಬರುತ್ತವೆ. ಹೆಂಡತಿಯನ್ನು ವಂಚಿಸುವ ಮಾದಭಟ್ಟ, ಗ್ರಹಣಕರಿಯಲ್ಲಿ ಚಿತ್ರಿತವಾಗಿರುವ ಶಂಭ ಹೆಗಡೆ ದಿನಕ್ಕೊಂದು ಹೊಸ ಉದ್ಯೋಗ ಮಾಡುವ ವೆಂಕ ಲೋಕದ ಅರಿವಿಲ್ಲದೆ ಚಳವಳಿಕಾರರನ್ನು

ದೂಷಿಸುವ ಅಜ್ಜಿ ಮೊದಲಾದವರು ಎಷ್ಟು ಜನ ಇಲ್ಲ? ಶುದ್ಧವಾದ ಪವಿತ್ರ ಜೀವನವನ್ನು ನಡೆಸುತ್ತಿರುವ "ಸುಬ್ಬಬ್ಬೆ"ಯನ್ನು ಓದಿ ಅನುಕಂಪವಾಗದಿರದು. ಕೊನೆಯ ಕಥೆ ಕಡಲಿನಲ್ಲಿ ನಡೆಯುವ ಘಟನೆಯೊಂದರ ಸುಂದರವಾದ ಚಿತ್ರಣ.

ಪ. ಸು. ಭಟ್ಟರು ಎಲ್ಲ ಚಿತ್ರಗಳನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಜನಜೀವನವನ್ನು ಚಿತ್ರಿಸುವದರಲ್ಲಿ ಇದು ಪ್ರಥಮ ಕೃತಿಯಾಗಿರುವದರಿಂದ ಕೆಲವು ದೋಷಗಳು ಕೂಡಿರಬಹುದು. ಆದರೆ ಕನ್ನಡಿಗರ ಸಲಹೆ ಸಹಕಾರಗಳಿಂದ ಗೆಳೆಯ ಪ. ಸು. ಭಟ್ಟರು ಕರ್ನಾಟಕದ ಒಬ್ಬ ಉತ್ತಮ ಕತೆಗಾರರಾಗುವರೆಂಬುದರಲ್ಲಿ ಸಂಶಯವಿಲ್ಲ. ಅವರ ಈ ಸಂಗ್ರಹ ಅದನ್ನು ಎತ್ತಿ ತೋರಿಸಿಕೊಡುತ್ತಿದೆ. ಗೆಳೆಯ ಪ. ಸು. ಭಟ್ಟರು ಇನ್ನೂ ಹೆಚ್ಚು ಹೆಚ್ಚಾಗಿ ನಮ್ಮ ಜಿಲ್ಲೆಯ ಜೀವನವನ್ನು ಚಿತ್ರಿಸುವ ಕಥೆಗಳನ್ನು ಬರೆದು ನಮ್ಮ ಜಿಲ್ಲೆಯ ಜೀವನವನ್ನು ಇತರರಿಗೆ ಪರಿಚಯಮಾಡಿ ಕೊಡಲಿ ಎಂದು ಹಾರೈಸುತ್ತೇನೆ

೮ ಜೂನ ೧೯೫೮ **ಲಕ್ಷ್ಮೀನಾರಾಯಣ ಭಟ್ಟ ಬಾಡ.**

# ಬರೆಹಗಾರನ ಮಾತು



ಉತ್ತರಕನ್ನಡದ ಪಡುವಣದ ಹನ್ನೆರಡು ಜೀವನ ಚಿತ್ರಗಳು ಈ ಹೊತ್ತಿಗೆಯಲ್ಲಿದೆ. ಈಗಾಗಲೇ ಗೆಳೆಯ ವಿ. ಜಿ. ಭಟ್ಟರ ಇಂತಹ ಎರಡು ಹೊತ್ತಿಗೆಗಳು ಪ್ರಕಟವಾಗಿವೆ. 'ನಮ್ಮ ಜನಜೀವನವನ್ನು ಚಿತ್ರಿಸು' ಎಂದು ವಿ. ಜಿ ಆಗಿಂದಾಗ್ಗೆ ನನಗೆ ಹೇಳುತ್ತಲೇ ಇದ್ದರು. ನಮ್ಮ ಜನಜೀವನವನ್ನು ಚಿತ್ರಿಸುವದನ್ನು ಬಿಟ್ಟು ದೂರ ಹಾರಬೇಡ ಎಂದವರು ಬೋಧಿಸಿದರು. ಅದೇ ಹೊತ್ತಿಗೆ ಗೆಳೆಯ ಎಲ್. ಜಿ. ಭಟ್ಟರು ನೀನೂ ಅವರ ಹಾಗೇ ನಮ್ಮ ಜಿಲ್ಲೆಯ ಜೀವನ ಚಿತ್ರಗಳನ್ನು ಚಿತ್ರಿಸು ಎಂದು ಒತ್ತಾಯ ಪಡಿಸಿದರು. ಗೆಳೆಯ ಎಲ್. ಜಿಯವರ ಒತ್ತಾಯದ ಫಲವಾಗಿ 'ಪಡುವಣ' ಇಂದು ಬೆಳಕು ಕಾಣುತ್ತಿದೆ. ಕನ್ನಡ ಓದುಗರು ಇದನ್ನು ಆದರದಿಂದ ಬರಮಾಡಿಕೊಳ್ಳುವರೆಂದು ನಂಬಿರುವೆ. ಜಿಲ್ಲೆಯ ಜೀವನ ಚಿತ್ರಿಸುವ 'ಕಾಂಚಿಕಾ' ಮತ್ತು 'ಮಲೆನಾಡು' ಸಹ ಇದೇ ವರ್ಷ ಪ್ರಕಟವಾಗಲಿದೆ.

ಇನ್ನು ಈ ಸಂಗ್ರಹ ಪ್ರಕಟವಾಗಲು ಕಾರಣರಾದ ಗೆಳೆಯ ಎಲ್. ಜಿ. ಭಟ್ಟ, ಮತ್ತು ಅಚ್ಚಿಗೆ ಪ್ರತಿಯನ್ನು ತೆಗೆದು ಕೊಟ್ಟ ಗೆ ಪ. ವೆಂ. ಹೆಗಡೆಯವರಿಗೆ ಬಂಧುತ್ವದ ವಂದನೆಗಳು. ಮೊದಲಿನಿಂದ ಸಲಹೆ ಸಹಕಾರಗಳನ್ನು ನೀಡುತ್ತಿರುವ ಗೆಳೆಯ ವಿ. ಜಿ. ಭಟ್ಟರಿಗಂತೂ ನಾನು ಚಿರಋಣಿಯಾಗಿದ್ದೇನೆ. ಈ ಸಂಗ್ರಹ ಬೆಳಕು ಕಾಣಲು ನೆರವಾದ ಎಲ್ಲರಿಗೂ ನನ್ನ ವಂದನೆಗಳು.

೮–೬–೪೮ ಪ. ಸು. ಭಟ್ಟ

## ಪ. ಸು. ಭಟ್ಟರ

| | |
|---|---|
| ಸುಖಲೋಕ | (ಕಥಾಸಂಗ್ರಹ) |
| ಸುಯೋಧನ | (ನಾಟಕ) |
| ಕಾಂಚಿಕಾ | (ಜೀವನ ಚಿತ್ರಗಳು) |
| ಮಲೆನಾಡು | ( ” ) |
| ಕುರುಡು ಕಣ್ಣ | (ಕಾದಂಬರಿ) |
| ಪ್ರೇಮ-ಕಾಮ | (ಕಥಾಸಂಗ್ರಹ) |
| ಸ್ವರ್ಗಸುಖ | (ನೀಳ್ಗತೆ) |

## ಬೇಗನೇ ಪ್ರಕಟವಾಗಲಿದೆ

ವಿವರಗಳಿಗಾಗಿ:

**ಎಲ್. ಜಿ. ಭಟ್ಟ, ನೀಲಗಿರಿ ಟೀ ಡಿಪೊ, ಶಿರಶಿ.**

# ಪರಿವಿಡಿ

# ಬೆಚ್ಚು

●

ಸಾಧಾರಣ ರಾತ್ರಿ ಹತ್ತು ಘಂಟೆ ಆಗಿರಬೇಕು.

ಕುಮಠೆ ಪೇಟೆಗೆ ಮಿತ್ರನೊಬ್ಬನನ್ನು ಭೆಟ್ಟಿಯಾಗ ಹೋದವನಿಗೆ ಅದೂ ಇದೂ ಮಾತನಾಡುತ್ತ ಹೊತ್ತಾಗಿ ಹೋಯಿತು. ನನಗೇನು ದೆವ್ವ ಭೂತಗಳ ಇರುವಿಕೆಯಲ್ಲಿ ಏನೂ ಸಂಬಿಕೆಯಿಲ್ಲದಿದ್ದರೂ ರಕ್ತಸಂಸ್ಕಾರ ದಿಂದಲೋ ಏನೋ ರಾತ್ರಿ ಕತ್ತಲೆಯಲ್ಲಿ ಹೋಗುವಾಗ ಏಕೋ ಎದೆ ಡವ ಡವ ಎನ್ನುತ್ತದೆ. ನಮ್ಮೂರದಾರಿಯಲ್ಲಂತೂ ಕಂಡಾಬಟ್ಟೆ ಮಾಸ್ತಿಕಲ್ಲು ಗಳು – ದೆವ್ವಭೂತಗಳ ಬೀಡಾರಗಳೂ ಸಿಗುತ್ತವೆ. ರಾತ್ರಿ ಅವೆಲ್ಲ ತಮ್ಮ ಗಡಿಯಲ್ಲಿ ಸಂಚರಿಸುತ್ತವೆಯಂತೆ. ಎಲ್ಲರಿಗೂ ಪ್ರತ್ಯಕ್ಷವಾದ ಹಾಗೆ ನನ್ನ ಮುಂದೂ ಒಂದು ನಿಂತುಬಿಟ್ಟರೆ........? ಥೇ! ಎಲ್ಲಾ ಸುಳ್ಳು ಎಂದು ಕೊಂಡರೂ ಅಲ್ಲಲ್ಲಿ ಬಂದಾಗ ಜನವಾರದ ಗಂಟನ್ನು ಹಿಡಿದುಕೊಂಡು ಎಂದೆಂದೂ ಮಾಡದ ಪಂಚಾಕ್ಷರೀ ಜಪಗಳನ್ನು ಮಾಡುತ್ತ ರಸ್ತೆಯ ದಾರಿ ಯನ್ನು ದಾಟಿ ಗದ್ದೇ ಬಯಲಿನ ದಾರಿಗೆ ಬಂದೆ. ಆ ದಿವಸ ಕೃಷ್ಣಪಕ್ಷದ ರಾತ್ರಿಯಾಗಿರದಿದ್ದರೂ ಮೋಡದ ಸಂದುನಲ್ಲಿ ಚಂದ್ರ ಅಡಗಿಬಿಟ್ಟಿದ್ದ. ಗದ್ದೇ ಬಯಲಿನಲ್ಲಿ ಹೋಗುವಾಗಲೂ ನನ್ನನ್ನು ಆವರಿಸಿದ ಭೀತಿ ಇನ್ನೂ ತೊಲಗಿರ ಲಿಲ್ಲ.

ತಲೆ ಬಗ್ಗಿಸಿಕೊಂಡು ಸರಸರನೆ ಹೋಗುತ್ತಿದ್ದೆ. ಎಲ್ಲಿಯಾದರೂ ಸ್ವಲ್ಪ ಸಪ್ಪಳವಾದರೂ ಸಾಕು ಗಾಬರಿಯಿಂದ ನೋಡುತ್ತಿದ್ದೆ. ಒಮ್ಮೆ ಏನೋ ಸಪ್ಪಳವಾದಂತಾಗಿ ತಲೆ ಎತ್ತಿನೋಡಿದೆ. ದೇವಾ........! ಎದುರಿಗೇ ನಿಂತುಬಿಟ್ಟಿದೆ. ಅಕರಾಳ ವಿಕರಾಳ ಸ್ವರೂಪ. ಸೊಟ್ಟಪಟ್ಟ ಕೈಗಳು. ಮುಡಿಕೆಯಂತಹ ತಲೆ. ಹೊಟ್ಟೆಯಾದರೋ—ಅಯ್ಯಯ್ಯೋ! ನನ್ನ ಕಾಲು ಥರಥರ ಎಂದು ಕಂಪಿಸಿತು. ಆ ಭೂತ ಆ 'ಮೊಗೇಪೋಳಿ' ಹತ್ತಿರವೇ

ನಿಂತಿತು. ನಾನು ಕಣ್ಣು ಮುಚ್ಚಿಕೊಂಡೇ ಕಾಲಿಗೆ ಬುದ್ಧಿ ಹೇಳಿದೆ. ಹಿಂತಿರುಗಿ ನೋಡಲೂ ಇಲ್ಲ. ಮನೆಗೆ ಬಂದಾಗ ಹಣೆಯಲ್ಲಿ ಬೆವರು ಮೂಡಿತ್ತು.

" ಯೆಂತಾ ಆನಮ್ಮಿ ಶ್ವಾಸ ತೆಗೆತ್ಯೊ ? " ಎಂದು ಅಜ್ಜಿ ಕೇಳಿದಳು. ಆದರೆ ನನ್ನ ಡಿಗ್ನಿಟಿಗೆ ಕುಂದು ಬರಬಹುದೆಂದು " ಹೊತ್ತಾಗ್ಹೋತು ಹೇಳ್ಯಾಡ್ಕಂಡು ಓಡಿ ಬಂದೆ " ಎಂದು ಸುಳ್ಳುಹೇಳಿಬಿಟ್ಟೆ.

ಮರುದಿನ ಗೆಳೆಯ ಲಕ್ಕಣ್ಣನ ಹತ್ತರ ನಿನ್ನೆ ಆದ ಕತೆಯನ್ನೆಲ್ಲ ವಿವರಿಸಿ ಹೇಳಿದೆ.

" ನೀಯೆಲ್ಲಿ ಕಂಡೆ ಅದ್ರ್ನ ? " ಎಂದು ಕೇಳಿದ ಲಕ್ಕಣ್ಣ.

" ಮೋಗೇವೋಳಿ ಹತ್ರ "

ಮೋಗೇವೋಳಿ ಎಂದ ಕೂಡಲೇ ಲಕ್ಕಣ್ಣ ಒಮ್ಮೆಲೇ ನಗಹತ್ತಿದ. " ಓಹೋ! ಏ ಪುಕ್ಕ ಮುಂಡೇದೇ! " ಎಂದು ಬಿಟ್ಟ. ಅವನು ಯಾಕೆ ನಕ್ಕನೆಂದು ನನಗೆ ಅರ್ಥವಾಗಲಿಲ್ಲ.

ನಾನು ಆ ವಿಕರಾಳ ಸ್ವರೂಪ ಕಂಡದ್ದೆಲ್ಲಿ ಎಂದು ಕೇಳಿಕೊಂಡು ಆ ಮೋಗೇವೋಳಿಯ ಹತ್ತಿರವೇ ಕರೆದುಕೊಂಡು ಹೋದ. ನಾನು ಏನನ್ನೋ ಯೋಚಿಸುತ್ತ ನಡೆದಿದ್ದೆ. "ಅದೆ ಅದೆ ನೋಡು ನೀ ಕಂಡ ಭೂತ" ಎಂದು ತೋರಿಸಿದ. ಎದೆ ಡವಡವ ಎಂದಿತು. ಹೋಗಿ ಹತ್ತಿರ ನೋಡುತ್ತೇನೆ. "ಬೆಚ್ಚು!" ಮೊಗೇ ಓಳಿಗೆ ಯಾರ ದೃಷ್ಟಿಯೂ ಬೀಳದಿರಲಿ ಎಂದು ಒಂದು ಗಡಿಗೆಯನ್ನು ಕವುಚಿ ಅಕರಾಳ-ವಿಕರಾಳ ಸ್ವರೂಪವಾದಿ ನಿಲ್ಲಿಸಿದ್ದರು. ಹುಲ್ಲಿನಿಂದ ಗುಡಾಣದಂತಹ ಹೊಟ್ಟೆ, ಸೊಟ್ಟ ಪಟ್ಟ ಕೈಮಾಡಿದ್ದರು. ಅಯ್ಯೋ ಮಳ್ಳೀ ಎಂದು ನನ್ನ ಬಗ್ಗೆ ನನಗೆ ನಗೆ ಬಂತು. ಇಬ್ಬರೂ ಹೊಟ್ಟೆ ತುಂಬಾ ನಕ್ಕು ಬಿಟ್ಟೆವು.

"ಊರ್ನವ ಅಯ್ಕಂಡ ಸಹ ಇಂತಾದೆಲ್ಲ ನಿನಗೆ ಗುತ್ತಿಲ್ಲೆ! ಶಿರಸೀ ಪೇಟೇಲೆ ಕಾರಂತರ ದೋಸೆ ಅಡೀಗ ಆಗ್ಹೋತನೋ ಎಲ್ಲಾ" ಎಂದು ನಕ್ಕು ಹಾಸ್ಯಮಾಡಿದ.

" ಯೀ ಮಾರಾಯ ಇದ್ದ್ಯ ಮಾತ್ರ ಯಾರಿಗೂ ಹೇಳಬೇಡ " ಎಂದು ಭಾಷೆತೆಗೆದುಕೊಂಡೆ.

ಸಣ್ಣವನಿರುವಾಗಲೇ ಶಿರಸಿಗೆ ಬಂದದ್ದರಿಂದ ಅಲ್ಲಿನ ರೀತಿನೀತಿ ಹೇಗೆ ಗೊತ್ತಾಗಬೇಕು. ಊರಿಗೆ ಹೋದುದೂ ಎಲ್ಲಾದರೂ ಕಾರ್ಯ-ಕಟ್ಲೆ ಇದ್ದಾಗ.

ಲಕ್ಷಣ್ಣ " ಬೆಚ್ಚು " ಕಂಡು ಬೆಚ್ಚಿದ ಅನೇಕ ಕತೆ ನನಗೆ ಹೇಳಿದ. ಮಳೆಗಾಲದಲ್ಲಿ ಹಾಳೀ ಕಂಟದ ಮೇಲೆ ನೆಟ್ಟ ಬೆಚ್ಚಿನ ಗುಟ್ಟ ಕಂಡು ಎಚ್ಚರ ತಪ್ಪಿ ಬಿದ್ದ ಒಬ್ಬ ಹಳ್ಳಿಯವನ ಸುದ್ದಿಯನ್ನೂ ನನಗೆ ಹೇಳಿದ. ಅವನ ಕತೆಯೂ ಹೆಚ್ಚು ಕಡಿಮೆ ನನ್ನಂತೆ ಇರುವದರಿಂದ ನೀವು ಊಹಿಸಿಕೊಳ್ಳ ಬಹುದು.

ಶ್ರಾವಣ ಮಾಸದಲ್ಲಿ ಭತ್ತಕ್ಕೆ ಕದರು ಬಂದಾಗ ನಮ್ಮಲ್ಲಿ ಬೆಚ್ಚಿನ ಸಂಕ್ರಾಂತಿ ಎಂಬ ಒಂದು ಹಬ್ಬ ಮಾಡುತ್ತಾರೆ. ಆದಿನ ಬೆಳಗಿನಲ್ಲಿ ಎಲ್ಲಿ ನೋಡಿದರೂ 'ಕೂ' ಧ್ವನಿಯೇ ಕೇಳಿಬರುತ್ತದೆ.

" ಬೆಚ್ಚಬೇಡ ಬೆದರಬೇಡ.

ಮುತ್ತಿನಂತಾ ಕದರ ತಾ "

ಎಂತ ಇನ್ನೇನನ್ನೋ (ನನಗೆ ಸರಿಯಾಗಿ ನೆನಪಿಲ್ಲ) ಹೇಳಿ ಹಾಳಿ ಕಂಟದ ಮೇಲೆ ಬೆಚ್ಚಿನ ಗುಟ್ಟ ಹುಗಿಯುತ್ತಾರೆ. ಇದನ್ನೆಲ್ಲಾ ನೀವೂ ತಿಳಿ ದಿಟ್ಟುಕೊಳ್ಳಿ ಸಮಯಕ್ಕೆ ಉಪಯೋಗ ಬಂದೀತು. ಕೊನೆಗೆ ಎಲ್ಲಾದರೂ ನಮ್ಮೂರಕಡೆಗೆ ರಾತ್ರಿ ವೇಳೆಗೆ ಬಂದಾಗ ಬೆಚ್ಚಗುಟ್ಟ ಕಂಡು ಬೆಚ್ಚಿಬಿದ್ದೀರಿ! ಜೋಕೆ !

---

# ಸುಗ್ಗೀಹುಣ್ಣಿಮೆ

ದಶಮಿಯ ದಿನವೇ ಸುಗ್ಗೀಮಕ್ಕಳು ರಾಮ, ಹನುಮಂತ ಮೊದಲಾದ ವೇಷ ಹಾಕಿಕೊಂಡು, ಹುಣಸೇ ಮರದ ಕೆಂಚಿನಿಂದ ಮಾಡಿದ ಆಟದ ಕೋಲನ್ನು ಹಿಡಿದುಕೊಂಡು, ಮೊದಲು ಊರ ದೇವಸ್ಥಾನಕ್ಕೆ ಹೋಗುತ್ತಾರೆ. ಸುಗ್ಗೀ ಹುಣ್ಣಿಮೆಯಲ್ಲಿ ಎಲ್ಲಿ ನೋಡಿದರೂ ಸುಗ್ಗೀಮಕ್ಕಳ ಕುಣಿತ, ಹಾಡುಗಳಿಂದ ಊರು ತುಂಬಿರುತ್ತದೆ.

ಗಣನಾಯಕಾಃ
ಗಣನಾಯಕಾಃ
ಸಿದ್ಧಿ ಬುದ್ಧಿ ರಮಣಾಃ
ಗಣನಾಯಕಾಃ

ಎಂದು ಮೊದಲು ಗಣಪತಿಯ ಸ್ತೋತ್ರಮಾಡಿ ದೇವರ ಮುಂದೆ ಕೋಲಾಟವಾಡುತ್ತ ಕುಣಿಯುತ್ತಾರೆ.

ಈ ಸಾರೆಯೂ ಮಣಿಗಾರ ನಾಗಪ್ಪ, ಹವಾಲದಾರ ಬಬ್ಬ, ಕೋಲುಕಾರ ಜಟ್ಟು, ನನ್ನೀಕೆರೆ ಸೂಲ, ಹೊಸಹಿತ್ಲ ಸುಕ್ರ ಮೊದಲಾದವರು ಸಗ್ಗಿಕಟ್ಟಿದರೆಂದ ಮೇಲೆ ಕೇಳಬೇಕೇ? ಅದರಲ್ಲೂ ಮಣಿಗಾರ ನಾಗಪ್ಪನ ಹನಮಂತನ ವೇಷ!

ದಶಮಿಯದಿನ ರಾತ್ರಿ ಜಾತಿ ಪಟಗಾರನ ಮನೆಯ ಮಠದ ಹಿತ್ತಲಲ್ಲಿ ಸುಗ್ಗೀಕಟ್ಟಿಕೊಂಡು ನನ್ನ ಕೇರಿಯುವರು ಹೊರಟರು.

ಹುಡುಗರ ಗೋಲೆಯಂತು ಅವರನ್ನು ಹಿಂಬಾಲಿಸಿ ದೇವಸ್ಥಾನಕ್ಕೆ ಬಂತು. ಸಂಗಡ 'ಗುಮ್ಮೆಪಾಗಾ' ದವರೂ ಇದ್ದರು. ಎಂದಿನಂತೆ

ಮೂವತ್ತು ಜನ ಸುಗ್ಗೀಮಕ್ಕಳು ಗಣನಾಯಕನ ಸ್ತೋತ್ರಮಾಡಿ ಕೋಲು ಹಾಕಿ ಕುಣಿಯಹತ್ತಿದರು.

ಕೋಽಲೂ ಕೋಲಣ್ಣ ಕೋಲೇಽ
ಕೋಽಲೂ ಕೋಲಣ್ಣ ಕೋಲೇಽ
ರನ್ನದಾ ಹೊನ್ನಿನಾ
ಬಣ್ಣದಾ ಬಿದರಿನಾ
ಕೋಽಲೂ ಕೋಲಣ್ಣ ಕೋಽಲೇ

ಕುಣಿತಕ್ಕೆ ಸರಿಯಾಗಿ ಹಾಡುತ್ತ ಅವರು ಕೋಲು ಹೊಡೆಯುತ್ತಿದ್ದರು. ನಂತರ 'ಚಾಜಿ' ನಂತೆ ಊರಿನ ಅಧ್ಯರೆನಿಸಿಕೊಂಡವರ ಮನೆಗೆ ಹೋಗಿ ಕುಣಿದು ಏನೂ ತೆಗೆದುಕೊಳ್ಳದೆ, ನಂತರ ಬೇರೆಬೇರೆ ಮನೆಯೆದುರಿಗೆ ಹೋಗಿ ಕುಣಿದು ದುಡ್ಡು ಎತ್ತಹತ್ತಿದರು.

ಮಣಿಗಾರ ನಾಗಪ್ಪನಂತೂ ಹನಮಂತನ ವೇಷದಲ್ಲಿ ಹಿಂದಿನ ಎಲ್ಲ ಬಾರಿಗಿಂತಲೂ ಮೀರಿಸಿದ್ದ ಗೋಣೀ ಚೀಲದಿಂದ ಇಡೀ ದೇಹ ಮುಚ್ಚಿಕೊಂಡಿದ್ದ. ಅಲ್ಲದೆ ಅದರ ಮೇಲೆ ತುಂಬಾ ದಟ್ಟವಾಗಿ 'ರೊಣೆ' ಹಚ್ಚಿಕೊಂಡಿದ್ದ. ಮುಖಕ್ಕೆ ಮಗದ ಹನಮಂತನ ಮುಖವನ್ನು ಹಾಕಿ ಕಟ್ಟಿಕೊಂಡಿದ್ದ. ಮಧ್ಯೆ ಮಧ್ಯೆ "ಹುರ್‍ರ್-ಹುರ್‍ರ್" ಎಂದು ಜಿಗಿಯುತ್ತಾ ಸಾಗುತ್ತಿದ್ದ. ಹತ್ತಿರ ಯಾವದಾದರೂ ಮರ ಕಂಡಕೂಡಲೆ 'ಬುರ್' ಎಂದು ಜಿಗಿದು ಮರವನ್ನು ಹತ್ತಿ ಕಪಿಯಂತೆ ಹೆಣೆಗಳನ್ನು ಅಲ್ಲಾಡಿಸುತ್ತಿದ್ದ, ಹುಡುಗರನ್ನು ಕಂಡರೆ ಅವರನ್ನೆಲ್ಲಾ ತೌರಿಕೊಂಡೇ ಹೋಗುತ್ತಿದ್ದ. ಆಚೆ ಮನೆ ಗಾಮವಾಣಿಯು ಹನಮಂತ ತೌರಿಕೊಂಡು ಬಂದು ಅವನ ಫಜೀತಿ ಹರಡಿಹೋಯಿತು ಹನಮಂತನ ಕಂಡದ್ದೇ ತಡ ದೀಕ್ಷಿತರ ಮನೆ ವಾಣಿ ಎಡಗೈಯಲ್ಲಿ ಜೀವ ಹಿಡಿದುಕೊಂಡು ಓಡಿಹೋಗಿ ಮನೆಒಳ ಹೊಕ್ಕಿಕೊಂಡು, ಬಾಗಲಮೀಡ ಹಾಕಿಕೊಂಡು ಕೂತವನು ಏನುಮಾಡಿದರೂ ಹೊರಗೆ ಬರಲಿಲ್ಲ.

ಕೋಲಾಟ ಮುಗಿದನಂತರ ಮನೆಯ ಯಜಮಾನ ತಂಡದ ಮುಂದಾಳಿಗೆ 'ವೀಳ್ಯ' ಕೊಟ್ಟನಂತರ, ಹನಮಂತ ಟುರ್‍ರ ಎಂದು ಹಾರಿಬಂದು ಅವರ

ಮುಂದೆ ಕುಣಿದಾಡಿ ವಿಶೇಷ ಹಣ ಪಡೆದುಕೊಳ್ಳುತ್ತಾನೆ. ಅವನ ಕುಣಿತಕ್ಕೆ ಮೆಚ್ಚಿ ಶಾಲು, ಧೋತರ ಮುಂತಾದವುಗಳನ್ನು ಕೊಡುವದೂ ಉಂಟು.

ಮಣಿಗಾರ ನಾಗಪ್ಪ ವೃದ್ಧನಾದರೂ ಅವನ ಉತ್ಸಾಹ ಮಾತ್ರ ಕಡಿಮೆಯಿರಲಿಲ್ಲ. ಧೋತರ-ಶಾಲುಬಿಟ್ಟು, ಕಡಿಮೆ ಕಡಿಮೆ ಎಂದರೆ ಸಾಧಾರಣ ೭೫–೮೦ ರೂಪಾಯಿಯಾದರೂ ಬರದೇ ಇರುತ್ತಿರಲಿಲ್ಲ. ಅಂದ ಮೇಲೆ ಸುಗ್ಗೀ ಕಟ್ಟದೆ ಬಿಟ್ಟಾನೆಯೇ ?

ಊರಿನ ಎಲ್ಲಾ ಮನೆ ತಿರುಗಿದ ಮೇಲೆ ಸುಗ್ಗೀ ಮಕ್ಕಳು ಆಸಪಾಸಿನ ಮೂರು-ನಾಲ್ಕು ಹಳ್ಳಿಗಳಿಗೂ ಹೋಗಿ ಕುಣಿದುಬರುತ್ತಾರೆ.

ನಮ್ಮೂರಿನಲ್ಲಿ ಕುಣಿದು ಮುಗಿದನಂತರ ಅವರು ಹತ್ತಿರಿನ ಹಳ್ಳಿಗೆ ಹೊರಟರು. ಆದರೆ ನಾವು ಮಾತ್ರ ಅವರ ಬೆನ್ನು ಬಿಡಲಿಲ್ಲ. ಎಲ್ಲೆಲ್ಲಿ ಏನೇನು ಆಯ್ತು ಎಂಬುದೆಲ್ಲಾ ವಾರ್ತೆ ನಮಗೆ ಬೇಕು. ನಾವು ಸಹ ಅವರಂತೆ ಎಲ್ಲಾದರೂ ಊಟಮಾಡುವದು–ಅವರ ಹಿಂದೆ ಹೋಗುವದು.

ಈ ಸಾರೆ ಕಾಗಾಲದಲ್ಲಿ ಹನಮಂತ ಕುಣಿದಷ್ಟು ಚೆನ್ನಾಗಿ ಮತ್ತೆ ಯಾವಾಗಲೂ ಕುಣಿದಿರಲಿಕ್ಕಿಲ್ಲ. ಹೋದವನೆ ಸುಬ್ಬಣ್ಣ ಹೆಗಡೇರ ಮನೆಯ ಪೇರಲ ಮರಕ್ಕೆ ಜಿಗಿದು ಹಣ್ಣನ್ನು ಕಚ್ಚಿ, ಕಚ್ಚಿ ಒಗೆಯುತ್ತಾ 'ಟುರ್' ಎಂದು ಇಡೀ ಮರವನ್ನು ಗಲಗಲನೆ ನಡುಗಿಸಿದ. ಮೊದಲು ಹೆಗಡೇರು ಹನಮಂತನಿಗೆಂದು ಎರಡು ರೂಪಾಯಿ ತೆಗೆದುಕೊಟ್ಟರು. ಆದರೆ ಅವರ ಸ್ಥಿತಿಯನ್ನರಿತ ಹನಮಂತ ಬಿಟ್ಟಾನೆಯೇ ? ಅವರ ಕಾಲಿಗೆ ಬಿದ್ದು, ಬಾಲವನ್ನು ಅಲ್ಲಾಡಿಸುತ್ತ ನಾನಾರೀತಿಯ ಲಾಗ ಹಾಕಿ ಕುಣಿದ. ಕೊನೆಗೆ ಅವರಿಂದ ಒಂದು ಹೊಸಾ ಶಾಲನ್ನು ಎಬ್ಬಿಸಿಯೇ ಬಿಟ್ಟ.

ಸುಗ್ಗೀ ಹುಣ್ಣಿಮೆಯದಿನ ಹನ್ನೆರಡರ ಸುಮಾರಿಗೆ ಸುಗ್ಗೀಮಕ್ಕಳು ತಾವು ಸುಗ್ಗೀ ಕಟ್ಟಿಕೊಂಡು ಬಂದ ಸ್ಥಳಕ್ಕೆ ತಿರುಗಿ ಬರುತ್ತಾರೆ. ಅದಕ್ಕೆ 'ಮಂಡ' ಹೊಕ್ಕುವದು ಎನುತ್ತಾರೆ. ಆದಿನ ಬೆಳಿಗ್ಗೆ ಅವರು ಏನನ್ನೂ ತೆಗೆದುಕೊಳ್ಳುವದಿಲ್ಲ. ಮಂಡ ಹೊಕ್ಕುವದನ್ನು ನೋಡಲು ಸಾವಿರಾರು ಜನರು ನೆರೆದಿದ್ದರು.

ಅರ್ಧ ಮೈಲು ದೂರದಿಂದಲೇ ಸುಗ್ಗೀ ಮಕ್ಕಳು ಹುಚ್ಚೆದ್ದು ಕುಣಿಯುತ್ತ ಬಂದರು. ವಾದ್ಯಗಳಿಂದ ಕಿವಿ ಗಡಚಿಕ್ಕುತ್ತಿತ್ತು.

ಆಚೆಮನೆ ಹಾರವಾ
ಈಚೆಯಾಕೆ ಬಂದೆ
ಸುಕ್ಕಿನುಂಡೆ ಜಾಯಕಾಯ
ರುಚಿನೋಡ ಬಂದೇ

ಎನ್ನುವ ಪದ ಹೇಳುತ್ತಾ ಕೋಲು ಹಾಕುತ್ತ ಒಮ್ಮೆಲೇ ಮಂಡದ ಕಡೆಗೆ ಬಂದರು. ಏನು ಕೌಶಲ್ಯ ತೋರಿಸುವದಿದ್ದರೂ ಹೆಚ್ಚಾಗಿ ಮಂಡ ಹೊಕ್ಕುವಾಗಲೇ !

ಇದೇ ಸಮಯದಲ್ಲಿ ಕೇರಿಯ ಮತ್ತೊಂದು ತಂಡ ಕಾಮನನ್ನು ಸುಡಲು ಕಾಯಿಕೇಳಲು ಅಲ್ಲೇ ಬಂದರು. ಈ ತಂಡದಲ್ಲೂ ಕಲ್ಲನಜಟ್ಟನ ಕೇರಿ, ಉಬ್ಬಣಗೇರಿ, ನಿಂಗನಕೇರಿ, ಮಡವಾಳಕೇರಿ ಮುಂತಾದ ಹಲವು ವಿಭಾಗ. ಇವರು ಸಹ ಕೆಲವು ಮಳ್ಳು ಮಳ್ಳು ವೇಷ ಹಾಕಿಕೊಂಡು ಡೋಳು ಬಡಿಯುತ್ತಾ

ಕಾಮನೋ ಭೀಮನೋ
ಕಲ್ಗುಂಡಿ ಬಸವನೋ
ಧೂಮಸಾಲ್ಯಣ್ಣ ಧೂಮಸಾಲ್ಯೋ

ಎಂದು ಹಾಡುತ್ತ ಮಂಡದ ಹತ್ತಿರವೇ ಬಂದರು. ಕೇಳುವದೇನು ? ಗದ್ದಲವೋ-ಗದ್ದಲ ! ಒಂದು ಬದಿಗೆ ಅವರು 'ಧೂಮಸಾಲ್ಯಣ್ಣ' ಹಾಕುತ್ತ ಕುಣಿಯಹತ್ತಿದರು. ಅವರಿಗಿಂತ ಚೆನ್ನಾಗಿ ಕುಣಿದು ತಮ್ಮ 'ಕಸಬನ್ನು' ತೋರಿಸಬೇಕೆಂದು ಮೂವತ್ತೂ ಜನ ಹಾಡುತ್ತ ಕೋಲುಹಾಕತೊಡಗಿದರು.

ಕೋಲೂ ಕೋಲಣ್ಣ ಕೋಲೇ
ಅಕ್ಕ ನಿನ್ನ ಮಾತ ಕೇಳಿ
ಮುತ್ತಿನಂತ ಗಿಳಿಯ ಸಾಕಿ
ರಕ್ಕೆ ಬಂದು ಈಗತಾನೇ

ಹಾಽರಿ ಹೋದವು
ಕೋಲು ಕೋಲಣ್ಣ ಕೋಲೇ

ಹನಮಂತನೂ ಮೈಮೇಲೆ ಎಚ್ಚರವಿಲ್ಲದವನಂತೆ ಕುಣಿದ. ಹತ್ತರವಿದ್ದ ಮರವನ್ನು 'ಟುರ್' ಎಂದು ಜಿಗಿದು ಅದರ ಮೇಲೆ ಹೆಣೆಯಿಂದ ಹೆಣಿಗೆ ಜಿಗಿಯುಹತ್ತಿದ.

ಒಮ್ಮೆಲೇ ಹಾಹಾಕಾರ ಮುಸುಕಿತು. ವಾದ್ಯಗಳು ನಿಂತವು. ಹನುಮಂತನ ಪಾತ್ರದಲ್ಲಿದ್ದ ನಾಗಪ್ಪ ಮರದಿಂದ ಕೆಳಗೆ ಬಿದ್ದಿದ್ದ. ಎಲ್ಲರ ಎದೆಯೂ ಡವಡವ ಎಂದಿತು. ಐದು ದಿನ ಕುಣಿಕುಣಿದು ಆಯಾಸಹೊಂದಿದ ನಾಗಪ್ಪ ಎಚ್ಚರವಿಲ್ಲದೆ ಭೂಮಿಯ ಮೇಲೆ ಬಿದ್ದಿದ್ದ.

"ನೀರತೆ ಕಂಬನ್ನಿ ನೀರ" ಎಂದು ಒಬ್ಬ ಕೂಗಿದ. ಕೂಡಲೇ ಅವನ ಮುಖದ ಮೇಲಿದ್ದ ಮರದ ಮುಖವನ್ನು ತೆಗೆದು ನೀರು ಚಮುಕಿಸಿದರು.

"ಗಾಳಿ ಹಾಕೋ" ಎಂದು ಮತ್ತೊಬ್ಬ ಒದರಿದ. "ಬದೀಗ್ಸರಕಳಿ ಗಾಳಿ ಬರ್ಲಿ" ಎಂದರೂ ಜನ ಸರಿಯಲಿಲ್ಲ. ಮರದಿಂದ ಬಿದ್ದ ನಾಗಪ್ಪನ ಹಣೆಯಿಂದ ರಕ್ತ ಸೋರುತ್ತಿತ್ತು. ಹೆಂಡತಿ ಬಂದು ಅಯ್ಯಯ್ಯೋ ಎನ್ನಹತ್ತಿದ್ದಳು. ಕೂಡಲೇ ನಾಗಪ್ಪನನ್ನು ಒಳಗೆ ಸಾಗಿಸಿ ಅವನು ಕಟ್ಟಿಕೊಂಡ ವೇಷವನ್ನು ಲಗುಬಗೆಯಿಂದ ಕಳಚಹತ್ತಿದರು.

ಜನರು ಬಹಳಹೊತ್ತು ಅಲ್ಲಿ ನಿಂತು ಚದುರಹತ್ತಿದರು. ಕಲ್ಲನಜಟ್ಟಿ ಕೇರಿಯವರು ಕಾಯನ್ನೆತ್ತಿಕೊಂಡು ಮೊದಲಿನಂತೆ "ಧೂಮುಸಾಲ್ಯಣ್ಣ ಧೂಮು ಸಾಲ್ಯೋ" ಎನ್ನುತ್ತ ಕಾಮನ ಸುಡುವ ತಯಾರಿಗೆ ಹೊರಟರು.

ಸಮುದ್ರ ಬೇಲೆಯ ಮೇಲಿರುವ ತಮ್ಮ ಇಷ್ಟ ದೇವರಿಗೆಲ್ಲ ಕಾಯು ಬಾಗ ಮಂಡಕ್ಕಿ ನೈವೇದ್ಯ ಮಾಡಿ, ಕಾಮನ ದೊಡ್ಡ ಮೂರ್ತಿಗೆ ಮೊದಲು ಬೆಂಕಿಹಚ್ಚಿ, ಅದನ್ನು ಹೊತ್ತುಕೊಂಡು ಸಮುದ್ರಕ್ಕೆ ತೆಗೆದುಕೊಂಡು ಮುಳುಗಿಸಲು ಹೊರಟರು.

ಅದೇ ಸಮಯದಲ್ಲಿ ಮತ್ತೊಂದು ಕಡೆಗೆ ಹೆಣಕ್ಕೆ ಬೆಂಕಿ ಹಚ್ಚುತ್ತಿದ್ದರು

ಕಾಮನು ಸುಟ್ಟು ಬೂದಿಯಾಗುವ ಹೊತ್ತಿಗೆ, ಹನುಮಂತನ ವೇಷ ಹಾಕಿದ ಮಣಿಗಾರ ನಾಗಪ್ಪನೂ ಸುಟ್ಟು ಬೂದಿಯಾಗಿ ಸಮುದ್ರ ಬೇಲೆಯ ಹೊಯಗೆಯಲ್ಲಿ ಬೆರೆತಿದ್ದ.

ಆದರಿಂದ ಮುಂದೆ ಇಂದಿನ ವರೆಗೂ ನನ್ನ ಕೇರಿಯವರು ಸುಗ್ಗಿ ಕಟ್ಟಲಿಲ್ಲ.

---

# ಸಪ್ಪರತಿ ಕಲ್ಲು

●

ಅಘನಾಶಿನಿಗೆ ಹೋಗುವ ದಾರಿಯಲ್ಲಿ ಒಂದು ಬೋಳು ಗುಡ್ಡೆಯ
ತಲೆಯ ಮೇಲೆ 'ಸಪ್ಪರತಿ ಕಲ್ಲು' ಸಿಗುತ್ತದೆ. ದಾರಿಯ ಮೇಲೆ ಹೋಗು
ವವರೆಲ್ಲ ಆ ಸಪ್ಪರತಿಯ ಕಲ್ಲಿನ ಮೇಲೆ ಒಂದು ಕಲ್ಲನ್ನೂ, ಹತ್ತಿರಿರುವ
ಮಾಸ್ತಿಯೆದುರಿಗೆ ಒಂದು ಮುಷ್ಟಿ ಕೆಂಪು ಮಣ್ಣನ್ನೂ ಹಾಕಿ ಹೋಗುವದು
ವಾಡಿಕೆ.

ಇದರ ಬಗ್ಗೆ ಅಲ್ಲಿ ಅನೇಕಾನೇಕ ದಂತ ಕತೆ ಪ್ರಚಾರದಲ್ಲಿದೆ.
ಮೊದಲು ಅಲ್ಲಿ 'ಒಮ್ಮಲತಿ' ವಾಸಿಸುತ್ತಿದ್ದಳಂತೆ. ದಾರಿಯಲ್ಲಿ ಹೋಗು
ವವರನ್ನು ಅಡ್ಡಗಟ್ಟಿ "ಬಟ ಸುಣ್ಣ ಕೊಡ್ತೋ, ಬಟ ಸುಣ್ಣ ಕೊಡ್ತೋ"
ಎಂದು ಕೇಳುತ್ತಿದ್ದಳಂತೆ, ಕೊನೆಗೆ ಅವರು ಅದನ್ನು ಕೊಡಲು ಬಗ್ಗಿದಾಗ
ಅವರನ್ನು ತನ್ನ ವಿಷಸ್ತನಗಳಿಂದ ಕೊನೆಗಾಣಿಸುತ್ತಿದ್ದಳಂತೆ. ಹೀಗಿರಲು
ಒಬ್ಬ ಸಾಧು ತನ್ನ ಮಂತ್ರದ ಬುರುಡೆಯಿಂದ ಒಮ್ಮಲತಿಯನ್ನು ಅಲ್ಲಿ ಹುಗಿದ
ನಂತೆ ಎಷ್ಟು ಕೊಟ್ಟರೂ ಆದಕ್ಕೆ ತೃಪ್ತಿಯಿಲ್ಲದ್ದರಿಂದ ಹೋಗುವವರೆಲ್ಲ
ನಿನ್ನ ತಲೆ ಮೇಲೆ ಕಲ್ಲು ಹಾಕಲಿ ಎಂದನಂತೆ. ಆದರೆ ಅದು ಬೇಡಿಕೊಂಡ
ನಂತರ ಅಮಾವಾಸ್ಯೆಗೊಮ್ಮೆ ತನ್ನ ಗಡಿಯಲ್ಲಿ ಸಂಚರಿಸಲು ಸ್ವಾತಂತ್ರ್ಯ
ದೊರಕಿತಂತೆ.

ಒಮ್ಮೆ ಬೀರಗೌಡ ಏನೋ ವಿಚಾರದಲ್ಲಿದ್ದವ ಕಲ್ಲುಹಾಕಲು ಮರೆತು
ನಡೆದ. ಸ್ವಲ್ಪದೂರ ಹೋಗುವದರೊಳಗೆ ಯಾರೋ ಕಲ್ಲಿನಿಂದ ಹೊಡೆದಂತೆ
ಭಾಸವಾಗಿ ಬಿದ್ದು ಬಿಟ್ಟ. ಕೊನೆಗೆ ಜ್ವರದಿಂದ ಹಾಸಿಗೆ ಹಿಡಿದ. ಆದರೂ
ಅವನನ್ನು ಪುನಃ ಹೊತ್ತುಕೊಂಡು ಬಂದು ಸಪ್ಪರತಿ ಕಲ್ಲಿಗೆ ಕಲ್ಲನ್ನೂ ಮಾಸ್ತಿ
ಎದುರಿಗೆ ಒಂದು ಮುಷ್ಟಿ ಮಣ್ಣನ್ನೂ ಹಾಕಿದ ಮೇಲೆ ಗುಣವಾಯಿತಂತೆ.

ನಾನು ಅಗಸೆಗೆ ಹೋದಾಗ ಒಂದು ಸಂಗತಿ ನಡೆಯಿತು. ಆಗ ಅಲ್ಲಿ
ಲೋಕಲ್ ಬೋರ್ಡ ರಸ್ತೆ ಶುರುವಾಗಿತ್ತು. ಬೇರೆ ಕಡೆಯಿಂದ ಕಲ್ಲು

ಹೊತ್ತು ಹಾಕುವದರ ಬದಲು ಸಪ್ಪರತಿ ಕಲ್ಲಿನ ರಾಶಿಯಿಂದಲೇ ಅಲ್ಲಿಂದ ಕಲ್ಲು ತರುವದು ಲೇಸು ಎಂದು ಅಧಿಕಾರಿಗಳು ನುಡಿದರು.

"ಆದಕ್ಕs ಬಾಳ ಶಕ್ತಿ ಈತು. ಹಾಂಗೆಲ್ಲ ಮಾಡೀರ ನಮ್ಗ ಸುಕಾ ಆಗಾಕಿಲ್ಲ ಒಡ್ಯಾ" ಎಂದು ಜಟ್ಟ್ಯಬೀರು ಅಧಿಕಾರಿಗೆ ಎಚ್ಚರಿಸಿದರೂ ಹೂಂ, ಹಳ್ಳಿಯ ಮಡ್ಡರು ಎಂದು ಅವನ ಮಾತು ಗಣನೆಗೆ ತರದೆ ಮೋಟಾರ ತೆಗೆದುಕೊಂಡು ಹೋಗಲು ಹೇಳಿದ. ಅಲ್ಲಿನ ಚಿತ್ರವಿಚಿತ್ರ ಕತೆ ಕೇಳಿದ ಡ್ರಾಯರ್ ವರನಿಗೇಕೋ ಭೀತಿಯಾಯಿತು. ಆದರೂ ಅಧಿಕಾರಿಯ ಮಾತು ಮೀರದೆ ಸುಮ್ಮನೆ ಕುಳಿತ. ಆಳುಗಳು ಕಲ್ಲನ್ನು ತುಂಬಿದರು. ಅಷ್ಟರಲ್ಲಿ ಸಂಜೆಯಾಗುತ್ತ ಬಂದಿತು. ಡ್ರಾಯರ್‌ವರ ಮೋಟಾರ ಬಿಟ್ಟ. ಭೀತಿಯಿಂದಾತನ ಕೈನಡುಗಿತು. ಅಕರಾಳ ವಿಕರಾಳ ಆಕೃತಿಯೊಂದು ಮುಂದು ಬಂದು ನಿಂತಂತೆ ಭಾಸವಾಯಿತಂತೆ. ಹೇಂಡ್ಲು ತಪ್ಪಿಹೋಯಿತು. ಮೋಟಾರು ತಗ್ಗಿನಲ್ಲಿ ಬಿದ್ದುಹೋಯಿತು ಆಳುಗಳಿಗೆಲ್ಲ ಗಾಯವಾಯಿತು. ಡ್ರಾಯರ್‌ವರ ಎಚ್ಚರತಪ್ಪಿ ಬಿದ್ದ. ಅವನಿಗೆ ಭಯಂಕರ ಅಪಘಾತವಾಯಿತು. ಆರುದಿನ ನರಳಿ ನರಳಿ ಆತನು ಕಣ್ಣು ಮುಚ್ಚಿದ. ಆದರಿಂದ ಮೇಲೆ ಆ ಸಪ್ಪರತಿ ಕಲ್ಲಿನ ಗೋಜಿಗೆ ಯಾರೂ ಹೋಗಲಿಲ್ಲ. ಅಧಿಕಾರಿ ಒಬ್ಬ ಮುಸ್ಲಿಂ ಸಾಬಿಯಾಗಿದ್ದ. ಆತ ಕೈಯಲ್ಲಿ ಜೀವಹಿಡಿದುಕೊಂಡು ಅದೇ ದಿನ ಕುಮಟೆಗೆ ಓಡಿದ. ಈಗ ಮೊದಲಿನಂತೆ ಅದರ ಮೇಲೆ ಕಲ್ಲಿನ ರಾಶಿ ಹೆಚ್ಚಾಗುತ್ತಿದೆ.

ಇದರಂತೆ ಉತ್ತರ ಕನ್ನಡದ ಅನೇಕ ಕಡೆ "ಸಪ್ಪೂರ್ತಿ ಕಲ್ಲು" ಅಂತ ಇದೆ. ಆದರೆ ಅದರ ಕತೆ ಇದರಂತಿಲ್ಲ. ಅದರ ತಲೆಯ ಮೇಲೆ ಹಾಕುವದು ಸಪ್ಪುಗಳನ್ನು ! ಅವಕ್ಕಾಗಿಯೇ ಸಪ್ಪೂರ್ತಿ ಅಂತ ಕರೆಯುತ್ತಿರಬೇಕು. ಸಪ್ಪೂರ್ತಿ ಹೋಗಿ ಇಲ್ಲಿ ಸಪ್ಪರತಿ ಆಗಿರಬೇಕು. ಆದರೆ ಅವೆಲ್ಲ ವೀರರ ಸ್ಮಾರಕವೆಂದು ತಿಳಿಯುತ್ತಾರೆ.

ಡ್ರಾಯರ್‌ವರನ ಕತೆ ಕೇಳಿದ ಸಣ್ಣೇಭಟ್ಟರು "ಈಗಿನ ಕಾಲ್ದವ್ರೆ ದೇವ್ರು ದಿಂಡ್ರೆಲ್ಲಾಯೆಲ್ಲಿ? ನಾವ ಹೇಳದ್ದೆಲ್ಲ ಸುಳ್ಳೇ ಕಾಣ್ತು. ಕಂಡ್ತು ಈಗ ದೇವ್ರು ಇದ್ದ್ವೋ ಇಲ್ವ್ಯೋ ಹೇಳಿ" ಎಂದು ನುಡಿದರು ನನ್ನಹತ್ತರ.

---

# ಬಂಗೀ ಮುಕ್ಕ

●

ಗೊಂಡೇ ಮಠದ ಸುಬ್ಬಣ್ಣ ಭಟ್ಟರು, ರಾಮಭಟ್ಟರು ಬಂಗೀ ಭಾವಂದಿರೆಂದು ಕರೆಯುವದು ವಾಡಿಕೆ. ಇವರಿಬ್ಬರಲ್ಲಿ ಬಹಳ ದೋಸ್ತಿ. ಬಂಗಿಯ ಎರಡೆರಡು ದಮ್ಮು ಸೋಗಿಯುತ್ತಾ ಮಳೆಗಾಲದಲ್ಲಿ 'ಜುಂ' ಆಗಿ ಇಸ್ಪೀಟಿನ ಮಂಡವನ್ನು ಹೂಡಿ ಕಾಲಕ್ಷೇಪ ಮಾಡುವದರಲ್ಲಿ ಇವರಿಬ್ಬರು ಯಾವಾಗಲೂ ಒಂದುಗೂಡಿ ಇರುತ್ತಿದ್ದರು.

ಗೊಂಡೇಮಠದ ಸುಬ್ಬಣ್ಣ ಭಟ್ಟರು ಮನೆತನದ ಸ್ಥಿತಿಗತಿಯಲ್ಲಿ ಅಷ್ಟೇನು ಚೆನ್ನಾಗಿಲ್ಲವಾದರೂ, ಅವರ ಪೂರ್ತಕ್ಕೆ ಅವರಿಗೆ ಸಾಕಾಗುವಷ್ಟು ಆಸ್ತಿಯಿತ್ತು. ರಾಮಭಟ್ಟರ ಬಗ್ಗೆ ಹೇಳುವದಾದರೆ ಬಿಟ್ಟರೆ ಸಿಕ್ಕ; ಉಂಡರೆ ಮಲಗ ಅನ್ನುವಂತಿದ್ದರು. ಯಾವಾಗಲೂ ಗೊಂಡೇಮಠದವರ ಮನೆಯ 'ಹಕ್ಕೆಚಿಟ್ಟೆ'ಯ ಮೇಲೇ ಕುಳಿತಿರುತ್ತಿದ್ದರು.

"ಬೇಜಾರ ಬತ್ತು. ಇಸ್ಪೀಟ್ನ ಪಟ್ಟ್ಯ ಆದ್ರೂ ತೆಕಂಬಾ. ಹೇಂಗಾದ್ರೂ ದಿನ ದೂಡವಲಿ." ಎಂದು ದಿನವೂ ಭಾವಂದಿರಿಬ್ಬರೂ ಇಸ್ಪೀಟಿನ ಆಟದಲ್ಲಿ ತೊಡಗಿರುತ್ತಿದ್ದರು. ಆಡುವ ಮುಂಚೆ ಒಂದೆರಡು ಬಂಗಿ ದಮ್ಮು ಎಳೆಯದೆ ಹೋಗುತ್ತಿರಲಿಲ್ಲ.

ಅಕಸ್ಮಾತ ಒಮ್ಮೆ ಸುಬ್ಬಣ್ಣ ಭಟ್ಟರಿಗೆ ಬಂಗಿ ತಿಕ್ಕಬೇಕಾದರೆ ಒಂದು ಬೀಜ ಸಿಕ್ಕಿತು.

"ಅಲ್ದೋ, ರಾಂಭಾವ ಬಂಗೀ ಬೀಜ ಅಂಬ್ಲಾಂಗ ಕಾಣಸ್ತು." ಎನ್ನುತ್ತಾ ಸುಬ್ಬಣ್ಣ ಭಟ್ಟರು ರಾಮಭಟ್ಟರಿಗೆ ತೋರಿಸಿದರು.

" ಬಂಗಿ ವಿಪ್ರಮೀತ ತುಟ್ಯಾಗ್ಹೋಜು ಸುಮ್ನೆ ನಿಮ್ಮನೆ ಹಿಂದ್ಬದಿಗೆ ನೆಡುಲಾದ್ರು ನೆಡ್ಕೊ. ಅದು ಗನಾದಾಗ್ ಬೆಳತ್ತು ಅಂದ್ರೆ ದುಡ್ಡಿಗೆ ದುಡ್ಡೂ ಆದ್ಹಾಂಗ್ಹಾತು " ಎಂದು ರಾಮಭಟ್ಟರು ಸುಬ್ಬಣ್ಣಭಟ್ಟರನ್ನು ಹುರಿದುಂಬಿಸಿದರು.

ಸುಬ್ಬಣ್ಣಭಟ್ಟರಿಗೊ ಬೆಳಸುವ ಆಲೋಚನೆಯೂ ಇತ್ತು. ಆದರೆ ಸ್ವಲ್ಪ ಅಳುಬುರುಕ ಸ್ವಭಾವ. ಪೋಲೀಸ್ರು ಗೀಲೀಸ್ರು ಬಂದರೆ ಫಜೀತಿಯಾದೀತೆಂದು ಹೆದರಿದರು. ಆದರೂ ಆ ಬೀಜ ನಟ್ಟು ಬೆಳಸಿದರು. ಗಿಡವಾದರೂ ಚನ್ನಾಗಿಯೇ ಬೆಳೆಯಿತು. ಈ ಕಾರಭಾರ ಕೆಲ ಕ್ರಿಶ್ಚಿಯನ್ ಜನರಿಗೆ ಹೇಗೊ ಗೊತ್ತಾಯಿತು. ಅವರೆಲ್ಲರೂ ಕೂಡಿ ಏನೋ ಗಮ್ಮತ್ತು ಮಾಡಿದರು.

ಎಂದಿನಂತೆ ಬಂಗೀ ಭಾವಂದಿರಿಬ್ಬರೂ ಹಕ್ಕೆಚಿಟ್ಟೆಯ ಮೇಲೆ ಕುಳಿತಾಗ ಒಮ್ಮೆಲೇ ಮೂರು ಜನ ಪೋಲೀಸ ಡ್ರೆಸ್ಸಿನ ನಮೂನೆಯಲ್ಲಿ ಬಂದರು. ಭಾವಂದಿರಿಬ್ಬರಿಗೂ ನಡುಕ. ಅವರ ಜಬರ್‌ದಸ್ತಿ ನೋಡಿ ಇವರು ತಣ್ಣಗಾದರು. ಬಂಗೀ ಗಿಡ ನಟ್ಟದ್ದಕ್ಕೆ ಕೋಳ ಹಾಕಿಸುವೆನೆಂದು ಗದರಿಸಿದರು ಅವರು.

ಎಂದೂ ಯಾರಿಗೂ ಒಂದು ಪೈನೀಡದ ಗೊಂಡೇ ಮಠದ ಸುಬ್ಬಣ್ಣಭಟ್ಟರು ೨೦ ರೂಪಾಯಿ ತೆಗೆದುಕೊಟ್ಟರು ಅವರು ಒಳಗೊಳಗೇ ನಗುತ್ತ ಬಂದ ದಾರಿ ಹಿಡಿದರು. ಇಷ್ಟೇ ಆದರೆ ಯಾರಿಗೂ ಏನೂ ಅನಿಸುತ್ತಿರಲಿಲ್ಲ. ಆದರೆ ಹೀಗೆ ಮಾಡಿದವರು ಕೆಲ ಕ್ರಿಶ್ಚನ್ ಪೋಲಿಗಳೆಂದು ತಿಳಿದಾಗ ಮಾತ್ರ ಅವರ ಹೊಟ್ಟೆಯುರಿಯಿತು. ಜನರೆಲ್ಲರೂ ಇವರನ್ನು ' ಬಂಗೀ ಮುಕ್ಕ ' ಎಂದು ಅಪಹಾಸ್ಯ ಮಾಡತೊಡಗಿದರು.

ಹುಡುಗರು ಈಗಲೂ ಅವರು ಹೋಗುವಾಗ ಅವರಿಗೆ ಕೇಳುವಂತೆ ಗಟ್ಟಿಯಾಗಿ ಹಾಡುತ್ತಾರೆ.

ಎಲ್ಲಾ ಬಿಟ್ಟ ಬಂಗೀ ನೆಟ್ಟ
ಗೊಂಡೇಮಠದ ಸುಬ್ಬಣ್ಣಭಟ್ಟ
ಇಪ್ಪತ್ತ ರೂಪಾಯಿ ದಂಡಾ ಕೊಟ್ಟ.

---

# ಬಾಗಲ ಜಟ್ಗ



ಕುಪ್ಪಯ್ಯ ಹೆಗಡೆಗೆ ಮೊದಲಿನಿಂದಲೂ ದೇವರಲ್ಲಿ ಅತ್ಯಂತ ಭಕ್ತಿ. ಯಾವ ಕೆಲಸ ಮಾಡುವಾಗಲೂ ದೇವರ ಹೆಸರನ್ನು ನೆನಸದೆ ಕಾರ್ಯ ಮಾಡಿದ್ದೇ ಇಲ್ಲ. ಜಪ, ತಪ, ಉಪವಾಸನೆಗಳಲ್ಲಿ ದಿನದ ಕೆಲಭಾಗ ಮೀಸಲಿಟ್ಟೇ ಇಡುತ್ತಿದ್ದ.

ಒಂದು ರಾತ್ರಿಬಾಡದ ಕಾಂಚಿಕಾಮ್ಮನೋರು ಅವನ ಕನಸಿನಲ್ಲಿ ಮೂಡಿ, ಇನ್ನು ಮುಂದೆ ತಾನು ನಿನ್ನ ಮುಖಾಂತರ ಭಕ್ತರಿಗೆ ಏನಾದರೂ ನುಡಿಯುವದಿದ್ದರೆ, ಅಥವಾ ಅವರು ಕೇಳಿದ ಪ್ರಶ್ನೆಗೆ ನಿನಗೆ 'ಮೈಮೇಲೆ' ಬಂದಾಗ ನಿನ್ನ ಬಾಯಿಂದ ನುಡಿಸುವೆನೆಂದು ಹೇಳಿ ಅಂತರ್ಧಾನವಾದಳಂತೆ.

ಆದರೆ ಕುಪ್ಪಯ್ಯ ಹೆಗಡೆಗೆ ಅದರ ಬಗ್ಗೆ ವಿಶೇಷವೇನೂ ಎನಿಸಲಿಲ್ಲ. ಆದರೂ ತನ್ನ ಓರಿಗೆಯವರ ಮುಂದೆ ಅಮ್ಮನವರು ಕನಸಿನಲ್ಲಿ ಕಂಡಿದ್ದನ್ನು ಹೇಳಿದ. ಇನ್ನು ಮುಂದೆ ಕುಪ್ಪಯ್ಯನಿಗೆ 'ಮೈಮೇಲೆ' ಬರಬಹುದೆಂದು ಆಡಿಕೊಳ್ಳಹತ್ತಿದರು.

ನವರಾತ್ರಿಯ ಮಹಾನವಮಿ. ದೇವರ ಅಭಿಷೇಕ ಅಲಂಕಾರ ಮುಗಿದು, ನೈವೇದ್ಯವೂ ಆಯಿತು. ಮಹಾ ಮಂಗಳಾರತಿ ಎತ್ತುವ ಸಮಯ ಬಂದಿತು. ಹರಹರ ಮಹಾದೇವ ಎಂದು ಘೋಷಣೆ ಆಗಹತ್ತಿತು.

ಆ ಸಮಯದಲ್ಲಿ ಕುಪ್ಪಯ್ಯ ಹೆಗಡೆ ಕೋಳಿ ಕೊಯ್ಯುತ್ತಲಿದ್ದ. ಮೈಗೆಲ್ಲಾ ಆರಲು ಬಡಿದಿತ್ತು. ಅವನಿಗೆ ಒಮ್ಮೆಲೇ ನಡುಕ ಉಂಟಾಯಿತು. ಯಾವದೋ ಶಕ್ತಿ ಬಂದು ಅವನನ್ನು ಕೂಡಿದಂತೆ ಭಾಸವಾಯಿತಂತೆ. ಅವನಿಗೆ ಮೈಮೇಲೆ ಎಚ್ಚರವೇ ಉಳಿಯಲಿಲ್ಲವಂತೆ.

"ಓ–ಓ" ಎಂದು ಕಿರಿಚುತ್ತಾ ಅವನು ಅದೇ ವೇಷದಲ್ಲಿ ದೇವಸ್ಥಾನದ ಮೆಟ್ಟಲುಗಳನ್ನು ಸರಸರನೆ ಏರುತ್ತಾ ಗರ್ಭಗುಡಿಯನ್ನು ಪ್ರವೇಶಿಸಿದ. ತಡೆಯಲು ಬಂದ ಹತ್ತು ಹನ್ನೆರಡು ಜನರೂ ಉರುಳಿದರು. ಗರ್ಭಗುಡಿಯ ಬಾಗಿಲಿಗೆ ತಾಗಿದ್ದ ಕಂಬವನ್ನು ಹೋಗಿ ಹಿಡಿದುಕೊಂಡು ಕರ್ಕಶ ಸ್ವರದಲ್ಲಿ ಕೂಗಹತ್ತಿದ. ಜನರೆಲ್ಲ ಇವನಲ್ಲಿ ದೇವಿ ಬಂದಿದ್ದಾಳೆಂದು ತಿಳಿದರು.

ಮಂಗಳಾರತಿ ಎತ್ತಿದನಂತರ, ಪೂಜಾರಿ ಬಂದು ಇವನಿಗೂ ಆರತಿ ಬೆಳಗಿದ. ನಂತರ ಆ ಕಂಬದಿಂದ ಕುಪ್ಪಯ್ಯನ ಕೈ ತಪ್ಪಿಸಿ ಕಣ್ಣಿಗೆ ನೀರು ಹಚ್ಚಿದನಂತರ ಮೈಮೇಲೆ ಬಂದದ್ದು ಇಳಿಯಿತು. ಅಂದಿನಿಂದ ಮುಂದೆ ಏನಾದರೂ ದೇವರಲ್ಲಿ ಕೇಳಿಕೊಳ್ಳುವದಿದ್ದರೆ, ದೇವರಿಗೆ ಕಾಣಿಕೆ ಹಾಕಿ, ಕುಪ್ಪಯ್ಯನ ಹತ್ತಿರ ಹೋಗಿ ಇಂಥಾ ದಿವಸ 'ಬಾಗಿಲ ಕಟ್ಟಬೇಕೆ'ಂದು ಮಾಡಿರುವೆನೆಂದು ತಿಳಿಸಿ ಎರಡು ರೂಪಾಯಿ ಕೊಟ್ಟು ಹೋಗುತ್ತಾರೆ. ಆ ದಿನದ ಉಪಹಾರಕ್ಕಾಗಿ ಒಂದು ಕೊಳಗ ಅಕ್ಕಿಯನ್ನು ಪರಿಚಾರಕನ ಹತ್ತಿರವೂ ಕೊಟ್ಟು ಹೋಗುತ್ತಾರೆ.

ಒಮ್ಮೆ ಮಾದಭಟ್ಟರ ಮನೆಯಲ್ಲಿ ಹತ್ತುಸಾವಿರ ರೂಪಾಯಿಯ ಸಾಮಾನು ಒಮ್ಮೆಲೇ ಕಳವಾಯಿತು. ಏನು ಮಾಡಿದರೂ ಕಳ್ಳರ ಪತ್ತೆಯಾಗಲಿಲ್ಲ. ಕೊನೆಗೆ ಮಾದಭಟ್ಟರು ಬಾಗಿಲ ಜಟ್ಟನನ್ನು ಕೇಳಿಕೊಳ್ಳಬೇಕೆಂದು ನಿಶ್ಚಯಿಸಿದರು. ಉಪಹಾರಕ್ಕಾಗಿ ಒಂದು ಕೊಳಗ ಅಕ್ಕಿ ತಂದು ಪರಿಚಾರಕನ ಹತ್ತಿರ ಕೊಟ್ಟರು. ದೇವರಿಗೆ ಕಾಣಿಕೆಹಾಕಿ ನೇರವಾಗಿ ಕುಪ್ಪಯ್ಯನ ಮನೆಗೆ ಬಂದು "ನಾಳೆಗೆ ಬಾಗಲ ಕಟ್ಟಕಳೋ ಹೇಳ್ಮಾಡಿದ್ದೆ" ಎಂದು ತಿಳಿಸಿದರು.

"ಅಕ್ಕು..........ನಾಳಂಗಬನಿ" ಎಂದು ಹೇಳಿಕಳುಹಿದ ಕುಪ್ಪಯ್ಯ.

ಮೈಮೇಲೆ ಬರುವ ದಿನ ಕುಪ್ಪಯ್ಯ ಉಪವಾಸ ಮಾಡಬೇಕು. ಸರಿಯಾಗಿ ಹೊತ್ತಿಗೆ ಮಿಂದು ದೇವಸ್ಥಾನಕ್ಕೆ ಮುಡಿಯನ್ನುಟ್ಟುಕೊಂಡು ಹೊರಟ ದೇವಸ್ಥಾನದಲ್ಲಿ ಮೈಮೇಲೆ ಬರುವದನ್ನು ಕೇಳಿ ಸಾವಿರಾರು ಜನ ನೆರೆದಿ

ದ್ದರು. ಇವನು ಬಂದ ದಾರಿ ಕಂಡು ಜನರು ದಾರಿ ಮಾಡಿಕೊಟ್ಟರು. ಕುಪ್ಪಯ್ಯ ದೇವಿಯ ಮುಂದೆ ಹೋಗಿ 'ಸಪ್ತಸ್ಥಿ ಪಾರಾಯಣ' ಮಾಡಿದ. ನೈವೇದ್ಯ ಮುಗಿದನಂತರ ಪೂಜಾರಿ ಮಹಾಮಂಗಳಾರತಿಯನ್ನು ದೇವಿಗೆ ಎತ್ತಹತ್ತಿದರು. ಹರಹರ ಮಾದೇವ ಎಂಬ ಕೂಗು ಎದ್ದಿತು. ಕುಪ್ಪಯ್ಯ ಎದ್ದು ಕೈಮುಗಿದು ನಿಂತ. ಗಡಗಡ ನಡುಗತೊಡಗಿತು. ಹೀಗೆ ಕ್ರಮೇಣ ಇಡೀ ದೇಹವೂ ಥರಥರ ಎಂದು ನಡುಗಹತ್ತಿತು ಕಣ್ಣುಗಳು ಭಯಂಕರವಾಗಿ ಕಾಣತೊಡಗಿದವು. ದೇವಿಯ ಪೂರ್ಣ ಭಾರ ಬಿದ್ದೊಡನೆ ಕೂಡಲೇ ಗರ್ಭ ಗುಡಿಯಿಂದ "ಹೋ" ಎಂದು ಜಿಗಿದು ಕಂಬವನ್ನು ಹಿಡಿದು 'ಓ' ಎಂದು ಕೂಗಹತ್ತಿದ. ಅವನ ಕುಣಿತದ ಜೊತೆಗೆ ಕಂಬವೂ ತಾಳಹಾಕುವಂತೆ ನಡುಗಹತ್ತಿತು. ಅಷ್ಟರಲ್ಲಿ ಮಂಗಳಾರತಿ ಮುಗಿಯಿತು.

ಆಗ ದೇವಸ್ಥಾನದ ಮೋಕ್ತೇಸರರು ಕೈಮುಗಿದು ನಿಂತು "ದೇವರೇ—ಮಹಾದೇವಿ ತಾಯೀ! ಮಾದಭಟ್ಟನ ಮನೆಯಲ್ಲಿ ಹತ್ತುಸಾವಿರ ರೂಪಾಯಿ ಕಳವಾಗಿದೆಯಂತೆ ಎಷ್ಟು ಹುಡುಕಿದರೂ ಸಿಗಲಿಲ್ಲಾ ಅಂತಾಯ್ತು. ಈಗ ನಿನ್ನಲ್ಲಿ ಅರಿಕೆ ಮಾಡಿಕೊಂಡಿದ್ದಾನೆ."

"ಹೋ! ಹೋ! ಹೋ! ಮಾದಭಟ್ಟನ ಮನೇಲಿ ಕಳವೋ? ಹ್ಹ! ಹ್ಹ! ಹ್ಹಾ! ಹ್ಹೋ! ಹ್ಹೊ! ಸಿಕ್ಕರೆ ಸನ್ನಿಧಿಗೇನರ್ಪಿಸುತ್ತಾನಂತೆ?" ದೇವಿಯು ಕುಪ್ಪಯ್ಯನ ಮುಖದಿಂದ ಕೇಳಿಸಿದಳು.

"ನಿನಗೆ ಅವನಿಂದ ಏನಪೇಕ್ಷೆ ಅದೆ ಅದನ್ನು ತಂದು ಒಪ್ಪಿಸಲಿಕ್ಕೆ ಅವ ತಯಾರಿದ್ದಾನೆ." ಎಂದು ಮೊಕ್ತೇಸರರು ಮರುನುಡಿದರು.

"ಹೀಗೋ—ಹಾಗಾದ್ರೆ ಎಂಟು ದಿನಗಳಲ್ಲಿ ಅವನ ಕಳವಾದ ಹಣ—ಎಲ್ಲಿದ್ದರೂ ತಿರುಗಿ ದೊರಕಿಸಿಕೊಡುವೆ—ಸಿಕ್ಕನಂತರ ಆ ಹಣದ ಕಾಲು ಪಾಲು ಕಾಣಿಕೆಯಾಗಿ ಬರಲಿ" ಎಂದು ಹೇಳಿ 'ನನ್ನ ಸ್ಥಾನಕ್ಕೆ ಹೋಗುತ್ತೇನೆ'ಂದು ದೇವಿ ಹೇಳಿದಳು.

ಅರ್ಚಕರು ಬಂದು ಬಾಗಲ ಜಟ್ಗನಿಗೆ ಮಂಗಳಾರತಿ ಮಾಡಿ, ಕುಪ್ಪಯ್ಯನ ಕೈಯ್ಯನ್ನು ಕಂಬದಿಂದ ತಪ್ಪಿಸಿ ಕಣ್ಣಿಗೆ ನೀರು ಹಚ್ಚಿದರು. ಕುಪ್ಪ

 

ಯ್ಯನಿಗೆ ಎಚ್ಚರವಾಯಿತು. "ದೇವಿ ಅಪ್ಪಣೆ ಎಂತಾಯಿತು" ಎಂದು ಅರ್ಚಕರಿಗೆ ಕೇಳಿದ ಕುಪ್ಪಯ್ಯ. ಅವರು ಕೇಳಿದ್ದೆಲ್ಲಾ ತಿಳಿಸಿದರು.

ಇತ್ತ ಕಳ್ಳನ ಎದೆ ಡವಡವ ಎನ್ನಹತ್ತಿತು. ಹೋಗಿ ಬಂದವರು ಇವನ ಹತ್ತಿರವೂ ಮೈಮೇಲೆ ಬಂದು ಹೇಳಿದ್ದನ್ನೆಲ್ಲಾ ಅರುಹಿದರು. ಕಳ್ಳ ಬೀರನ ಮೈಯೆಲ್ಲಾ ಬೆವತುಹೋಯಿತು. ದೇವೀ ಮಹಾತ್ಮೆ ಬಗ್ಗೆ ಅವನು ಅನೇಕ ಕತೆ ಕೇಳಿದ್ದ. ಬಾಡದ ಅಮ್ಮನೋರಲ್ಲಿ ಹೋದಮೇಲೆ ತನ್ನ ಬಚಾವಿಲ್ಲವೆಂದು ತಿಳಿದುಕೊಂಡ. ಒಮ್ಮೆ ಕಳುವಾದಾಗ ಅಮ್ಮನೋರಲ್ಲಿ ಕೇಳಿಕೊಂಡರಂತೆ. ಆಗ ಕದ್ದುಕೊಂಡು ಹೋದವರು ರಕ್ತಕಾರುತ್ತ ಬಂದು ಒಪ್ಪಿಸಿ ಹೋದನಂತೆ. ಅದನ್ನೆಲ್ಲಾ ಕೇಳಿ ಅವನಿಗೆ ಜೀವ ಹಾರಿಹೋದಂತಾಯಿತು.

ರಾತ್ರೆ ಮಲಗಿಕೊಂಡಾಗ "ಅಯ್ಯಯ್ಯೋ—ಬಂತು! ಬಂತು!—ಇಲ್ಲಾ ನಂದು ಸರೂ ತಪ್ಪಾತು. ಇನ್ಮುಂದೆ ಮಾಡುದಿಲ್ಲಾ. ಈಗ್ಮಾಡದ್ದು ಸರೂ ತಪ್ಪಾತು. ಅಯ್ಯೋ—ಅಯ್ಯಯ್ಯೋ" ಎಂದು ಒಮ್ಮೆಲೇ ಚೀರಿಬಿಟ್ಟ. ಅಚೆ ಈಚೆಯವರೆಲ್ಲಾ ಗಾಬರಿಯಾಗಿ ಬಂದು ಕೇಳಿದರು. ಆದರೆ ಬೀರ ಉಬ್ಬಸಬಿಡುತ್ತಾ ಮಲಗಿದ್ದ. ಏನನ್ನೂ ಹೇಳುವ ಸ್ಥಿತಿಯಲ್ಲಿರಲಿಲ್ಲ. ಬೆವರಿನಿಂದ ಹಾಸಿಗೆ ತೊಯ್ದು ಹೋಯಿತು.

ಅಂತೂ ಆ ರಾತ್ರಿಯನ್ನೇನೋ ದೂಡಿದ. ಆದರೆ ಅವನಿಗೆ ಹುಚ್ಚು ಹಿಡಿದಂತಾಗಿತ್ತು. ಮಧ್ಯೆ-ಮಧ್ಯೆ ಅಯ್ಯಯ್ಯೋ—ಬಂತು! ಬಂತು! ಎಂದು ಕೂಗಿಕೊಳ್ಳುವದೂ ಉರಿ-ಉರಿ ಎಂದು ಪರಿತಪಿಸುವದೂ ನಡೆದೇ ಇತ್ತು. ಕೊನೆಗೆ ಕಳುವು ಮಾಡಿದ ಹಣದ ಗಂಟನ್ನು ತೆಗೆದುಕೊಂಡು "ತೆಕಣಿ ನಿಮ್ಮ ಹಣ—ಒಂದು ಕಾಸೂ ಮುಟ್ಟಿಲ್ಲ." ಎನ್ನುತ್ತಾ ಮಾದಭಟ್ಟರ ಮನೆಗೆ ಓಡಿದ.

ಮಾದಭಟ್ಟರು ಅಂಗಳದಲ್ಲಿ ಕುಳಿತು ಕವಳ ಜಗಿಯುವದರಲ್ಲಿ ಮಗ್ನರಾಗಿದ್ದರು. ಇವನು ಹೋಗಿ ಕಾಲು ಹಿಡಿದು "ನಂದ ಸರೂ ತಪ್ಪಾತು ಒಡ್ಯಾ. ಇನ್ಮುಂದ ಇಂತಾ ಕೆಲಸ ಮಾಡೂದಿಲ್ಲ ನನ್ಕಾಪಾಡಿ—ಕಾಪಾಡಿ" ಎಂದು ಕಾಲಿಗೆ ಬಿದ್ದ.

ಗಂಟು ತಿರುಗಿ ದೊರೆತುದಕ್ಕೆ ಅವರಿಗೆ ಬಹಳ ಸಂತೋಷವಾಯಿತು. “ಹೆದ್ರಬೇಡ ಬೀರ. ದೇವಿ ನಿನ್ನ ಕಾಪಾಡ್ತಾಳೆ ಏಳು. ದೇವಸ್ಥಾನಕ್ಕೆ ಹೋಗಿ ಕಳೆದು ಹೋದ ಹಣ ಸಿಕ್ಕಿತೆಂದೂ, ಬೀರನಿಗೆ ಏನೂ ಆಗದಂತೆ ದೇವರಿಗೆ ಹೇಳಿಕೆ ಮಾಡಿಕೊಳ್ಳಿ ಎಂದು ಅರ್ಚಕರನ್ನು ಬಿನ್ನವಿಸಿದರು.

ಅರ್ಚಕರು “ದೇವರೇ ಮಹಾತಾಯಿ ನಿನ್ನಲ್ಲಿ ಅರಿಕೆಮಾಡಿಕೊಂಡಂತೆ ಅವನಿಗೆ ಹಣ ಸಿಕ್ಕಿತು. ಆದರೆ ಬೀರನೂ ನಿನಗೆ ಶರಣು ಬಂದಿದ್ದಾನೆ. ಅವನಿಗೆ ಏನೂ ಆಗದಂತೆ ಕಾಪಾಡುವದು ನಿನ್ನನ್ನೇ ಕೂಡಿದೆ ಹಣ ಸಿಕ್ಕರೆ ಕಾಲುಪಾಲು ನಿನಗೆ ಕೊಡುತ್ತೇನೆಂದು ಮಾದಭಟ್ಟ ಹೇಳಿಕೊಂಡಿದ್ದ. ಅವನ್ನು ಒಪ್ಪಿಸಿ ಪಾವತೀ ಪಡೆದಿದ್ದಾನೆ. ಇನ್ನು ಮುಂದೆ ಅವನಿಗೆ ಏನೂ ಕಷ್ಟ ಆಗದಂತೆ ಹೋದಲ್ಲಿ, ಬಂದಲ್ಲಿ, ಮನೇಲಿ, ಮಕ್ಕಳಲ್ಲಿ, ಬೆಳೇಲಿ, ಬೇಸಾಯದಲ್ಲಿ ಎಲ್ಲಾ ಚೆನ್ನಾಗಿ ನಡೆಯುವಂತೆ ಶಕ್ತಿಕೊಟ್ಟು ಸೇವೆ ತೆಗೆದು ಕೊಳ್ಳುವಂತೆ ಮಾಡು ಮಹಾ ತಾಯೀ” ಎಂದು ಹೇಳಿ ಮುಗಿಸುವಾಗ ‘ಹರ ಹರ ಮಹಾದೇವ’ ಎಂದರು ಹತ್ತಿರಿದ್ದವರು.

ಬೀರನಿಗೆ ಹೊಸ ಚೈತನ್ಯ ಬಂದಂತಾಯಿತು. ಅವನೂ ಅಲ್ಪ ಕಾಣಿಕೆಯೆಂದು ಅರ್ಚಕರ ಕೈಯಲ್ಲಿ ಒಂದು ರೂಪಾಯಿ ಇಟ್ಟ. ಇಬ್ಬರಿಗೂ ಅರ್ಚಕ ತೀರ್ಥ-ಪ್ರಸಾದ ಕೊಟ್ಟ.

ಇದೇ ರೀತಿ ಇನ್ನೂ ನೂರಾರು-ಸಾವಿರಾರು ಕಥೆಗಳು ಇವೆ. ಆದರೆ ಅವೆಲ್ಲವನ್ನೂ ಇಲ್ಲಿ ಹೇಳಲಾರೆ. ಹೇಳುವದು ಸ್ತುತ್ಯವೂ ಆಗಲಾರದು. ನಿಮ್ಮದೂ ಏನಾದರೂ ಹೇಳಿಕೊಳ್ಳುವದಿದ್ದರೆ ಬಾಡಕ್ಕೆ ಬಂದು ಬಾಗಲ ಜಟ್ಗನನ್ನು ಬಾಗಿಲು ಕಟ್ಟಿಕೊಂಡು ಕೇಳಿಕೊಳ್ಳಬಹುದು.

———

# ಮುಂಡಾಸ

●

"ಬೇಜಾರ ಬತು. ಹೀಂಗೇ ತಿರ್ಗ್ಯಾಡ್ಕಂಡು ಬತ್ತೆ" ಎಂದು ದಿನ ನಿತ್ಯವೂ ಮಾಬಲ ಹೆಗಡೇರು ಪಾರ್ವತಮ್ಮನಿಗೆ ಹೇಳಿ, ಮುಂಡಾಸ ಸುತ್ತಿಕೊಂಡು ಸರಿರಾತ್ರೆ ಒಂಬತ್ತರ ಸುಮಾರಿಗೆ ಮನೆಬಿಟ್ಟು ಹೋಗುತ್ತಿದ್ದರು. ಮರಳಿ ಮನೆಗೆ ಬಂದು ಯಾವಾಗ ಮಲಗಿರುತ್ತಿದ್ದರೋ ಏನೋ. ಬೆಳಿಗ್ಗೆ ಪಾರ್ವತಮ್ಮ ಎದ್ದು ನೋಡಿದಾಗಲಂತೂ ಹಾಸಿಗೆಯ ಮೇಲೆ ಬಿದ್ದುಕೊಂಡಿರುತ್ತಿದ್ದರು.

ದಿನವೂ ಬೇಜಾರ ಬಂದು ರಾತ್ರೆ ತಿರುಗಾಟಕ್ಕೆ ಹೋಗುವದೆಲ್ಲಿಗೆ ಎಂದು ಪಾರ್ವತಮ್ಮನಿಗೆ ದೊಡ್ಡ ಸಮಸ್ಯೆಯಾಗಿತ್ತು.

ಮದುವೆಯಾಗಿ ಆರೇಳು ವರ್ಷವಾದರೂ ಅವಳ ಹತ್ತರ ಸರಿಯಾಗಿ ಮಾತನಾಡರು. ಎಲ್ಲ ಮಾತೂ ಓರೆಕೋರೆಯ ಮೇಲೆಯೇ ಎಲ್ಲಿಯಾದರೂ ಹೋಗುವಾಗ ಮಾತ್ರ "ಈಗ್ಬಾಲೀ ಬತ್ತೆ" ಹೇಳಿ ಹೋಗುತ್ತಿದ್ದರು. 'ಈಗ್ಬಾಲೀ' ಎಂದರೆ ಅವರ ಅರ್ಥಕೋಶದಲ್ಲಿ ಎರಡು ತಾಸೋ ಮೂರು ತಾಸೋ ಆಗಿರಬೇಕು.

ಪ್ರತಿನಿತ್ಯದಂತೆ ಒಂಬತ್ತಕ್ಕೆ ಮುಂಡಾಸ ಸುತ್ತಿ "ಈಗ್ಬಾಲೀ ಬತ್ತೆ" ಎಂದು ಹೇಳಿ ಹೊರಟರು ಪಾಪ. ಎಷ್ಟು ಒಳ್ಳೆಯವಳು ಇವಳು ಎಂದು ಒಂದೆರಡು ಬಾರಿ ಆಡಿಕೊಂಡರು. ಆದರೂ ಅವರಿಗೆ ಇವಳಲ್ಲೇಕೋ— ಅಷ್ಟಕ್ಕಷ್ಟೇ!

ಒಂಬತ್ತರ ಮನೆಯಮೇಲಿದ್ದ ಗಡಿಯಾರದ ತಾಸಿನಮುಳ್ಳು ಹತ್ತರ ಮನೆಯನ್ನು ದಾಟಿ ಹನ್ನೊಂದರ ಮನೆಯನ್ನೂ ದಾಟಿ ಹೋಗುವದರಲ್ಲಿತ್ತು. ಬಂದಾರು, ಈಗ ಬಂದಾರೆಂದು ಅವಳು ಹಾಸಿಗೆಯಲ್ಲೇ ಹೊರಳಾಡುತ್ತಿದ್ದಳು. ಕೊನೆಗೆ ಒಮ್ಮೆ ನಿದ್ದೆ.

ಆವರವಳು ನಿದ್ರಿಸಲಿಲ್ಲ. ಹನ್ನೆರಡು ಹೊಡೆದಿರಬೇಕು. ಹೊರಗೆ ಕಾಲುಪೆಟ್ಟಿನ ಸದ್ದಾಯಿತು. ಎಚ್ಚರಿರಲಿ—ಎಚ್ಚರವಿರದಿರಲಿ ಅವರಿಗೇನು? ಅವಳು ಎಷ್ಟು ಮಾತನಾಡಬೇಕೆಂದು ಬಯಸಿದರೂ ಇವರು ಗೊರಕೆ ಹೊಡೆಯಲು ಹತ್ತುತ್ತಿದ್ದರು ಇಂದು ಮಾತನಾಡಿಸಲೇಬೇಕೆಂದು ನಿಶ್ಚಯಿಸಿದ್ದಳವಳು.

" ಆಗಲೇ ಹನ್ನೆರಡ ಘಂಟ್ಯಾಗ್ಹೋತು. ಹೊತ್ತೇ ತಿಳಿಜಿಲ್ಯೆನೋ " ಎನ್ನುತ್ತ ಪಾರ್ವತಮ್ಮ ಮೂಲೆಯಲ್ಲಿದ್ದ ದೀಪ ದೊಡ್ಡದು ಮಾಡಿದಳು.

ಆವಳೆದೆ ಧಸ್ಸೆಂದಿತು. ಎದೆ ಡವಡವ ಎಂದಿತು. ತಲೆಯಮೇಲೆ ಆವರ ಬಿಳಿಯ ಮುಂಡಾಸದ ಬದಲು ಒಂದು ಸೀರೆಯ ಮುಂಡಾಸವಿತ್ತು. ಹೌದು—ಆ ದಿವಸ ಅದನ್ನು ಮಾದಿ ಉಟ್ಟಿದ್ದನ್ನು ನೋಡಿದ್ದಳು. ಒಳ್ಳೆಯ 'ಹೋಪಲ್ಲೀ ಸೀರೆ'

" ಆಯ್ಯೋ ಇದ್ಯಾರಿಂದ್ರೊ " ಎಂದು ಹೇಳಿ ಅವಳು ಬಿಕ್ಕಿ ಬಿಕ್ಕಿ ಅಳಹತ್ತಿದಳು.

ಮಾಬಲ ಹೆಗಡೆಯವರು ಗಾಬರಿಯಿಂದ ಮುಂಡಾಸ ತೆಗೆದು ನೋಡಿದರು. ಒಮ್ಮೆಲೇ ಮುಖ ಬಿಳುಪೇರಿತು. ಮಾತನಾಡಲಾರದೆ ಅವರು ತಲೆತಗ್ಗಿಸಿದರು. ಅಂದಿನಿಂದ ರಾತ್ರಿಯ ತಿರುಗಾಟವೂ ಕೈದಾಯಿತು.

---

# ಹೊಸತು

●

'ವೆಂಕ' ನಾನು ಜೊತೆಯಲ್ಲಿ ಕಲಿತವರಾಗಿರದಿದ್ದರೂ ನಮ್ಮಿಬ್ಬರಲ್ಲಿ ಸಹಜವಾಗಿ ಸ್ನೇಹ ಬೆಳೆಸಿದೆ. ವೆಂಕನ ಪೂರ್ಣ ಹೆಸರು ವೆಂಕಟರಮಣ ಎಂದಿದ್ದರೂ ಎಲ್ಲರೂ ಅವನಿಗೆ ವೆಂಕ ಎಂದು ಕರೆಯುವದೇ ವಾಡಿಕೆ:

ಶಾಲೆಗೆ ಹೋಗುವಾಗಿನಿಂದಲೂ ವೆಂಕನ ರೀತಿಯೇ ಬೇರೆ. ಆತನಿಗೆ ಅಭ್ಯಾಸದಲ್ಲಿ ಲಕ್ಷ್ಯವೇ ಇರಲಿಲ್ಲ. ಆದರೆ ಅಣ್ಣ ಬೈಯುತ್ತಾನೆಂದು ಶಾಲೆಗೆ ಹೋಗುತ್ತಿದ್ದ. ಅಪ್ಪನಂತೂ ವೃದ್ಧನಾಗಿದ್ದ. ಒಮ್ಮೊಮ್ಮೆ ಶಾಲೆ ತಪ್ಪಿಸಲು ಅಪ್ಪನ ಕಾಲಹತ್ತುತ್ತ ಕೂಡ್ರುತ್ತಿದ್ದ.

"ಶಾಲೆಗೆ ಹೋಗೋ ಮಾಣೀ" ಎಂದು ಅಣ್ಣ ಒಮ್ಮೆ ಗುಡುಗಿದ ಮೇಲೆ ಅಳುತ್ತ ಶಾಲೆಯ ಹಾರಿ ಹಿಡಿಯುವ.

ಆಗ ಶಾಲೆಗೆ ಹೋಗದಿದ್ದರೆ ಶಾಲೆಯ ಮಾಸ್ತರರು ಬರದಿದ್ದವರನ್ನು ಕರೆದುಕೊಂಡು ಬರಲು ಹುಡುಗರನ್ನು ಕಳುಹುತ್ತಿದ್ದರು. ವೆಂಕನ ಮನೆಗಂತೂ ಪ್ರತಿನಿತ್ಯ ಅವರು ಬರುವದು ವಾಡಿಕೆಯಾಗಿತ್ತು.

ಒಂದು ದಿನ ವೆಂಕ ಶಾಲೆಗೆ ಹೋದನಂತರ ಆ ಹುಡುಗರು ಬಂದರು. "ಅಂವ ಆಗಲೇ ಶಾಲೆಗೆ ಹೋದ" ಎಂದು ಮನೆಯಲ್ಲಿ ಹೇಳಿದರು. "ಅಂವ ಶಾಲೆಗೆ ಬರಲೇ ಇಲ್ಲ" ಎಂದಿವರು ಉತ್ತರವಿತ್ತರು. ಮನೆಯಲ್ಲಿ ಆಶ್ಚರ್ಯವಾಯಿತು. ಶಾಲೆ ಬಿಟ್ಟೊಡನೆಯೇ ಶಾಲೆಗೆ ಹೋದವರಂತೆ ಬಂದು ತಣ್ಣೆ ಅನ್ನದ ಬಟ್ಟಲ ಮುಂದೆ ಕೂತುಬಿಟ್ಟ.

ಎಲ್ಲಿಗೆ ಹೋಗಿದ್ದೆಯೆಂದು ಕೇಳಲಾಗಿ, ನೆರಮನೆಯ ಹುಲ್ಲುಗೋದನೆಯಲ್ಲಿ ಆಡುಗಿದ್ದನೆಂದು ತಿಳಿಯಿತು ಸಣ್ಣಂದಿನಿಂದೂ ವೆಂಕ ಮಹಾ ಹುಳುಕ ಸ್ವಭಾವದವ. ಅಪ್ಪನಿಗೆ ಪ್ರೀತಿಯ ಮಗನಾದುದರಿಂದ ಬೇರೆಯವರಿಗೆ ಬೈಸುತ್ತಿದ್ದ. ನಾವು ಯಾರಾದರೂ ಮರದಡಿಗೆ ನಿಂತು ಕಷ್ಟಪಟ್ಟು ಮಾವಿನ

ಹಣ್ಣು ಹೆಕ್ಕುವದು, ಕೊನೆಗೆ ಇವನು “ ಅಪಾಯೆನ್ನ ಮಾವನಣ್ಣ ತೆಕಂಡ ತಮ್ಮಣ್ಣಾ ” ಎಂದು ಅತ್ತು ಆಪ್ಪನ ಹತ್ತರ ಹೇಳಿ ನಮ್ಮ ಹಣ್ಣನ್ನು ಕಸಿದು ಕೊಂಡು ಅಸ್ನುತ್ತಿದ್ದ.

ಆದರೆ ಅಪ್ಪ ಗತಿಸಿದ ನಂತರ ವೆಂಕನ ಹಾರಾಟ ನಿಂತಿತು. ಆಗ ತನ್ನ ಮೊದಲಿನ ಪುಂಗಿ ಬಿಟ್ಟು, ನಮ್ಮೆಡೆಗೆ ಸೇರಿದ. “ಅಂವ ಧಡ್ಡ ಮುಂಡೇಮಗ. ಅವಂಗ ಯಾರೂ ಹೊಡೆ ಬಡಿ.” ಎಂದು ಅವನಣ್ಣ ನಮ್ಮ ಹತ್ತರ ಹೇಳುತ್ತಿದ್ದ. ನಿಜವಾಗಿಯೂ ಅವನೂ ಪೆದ್ದ ಸ್ವಭಾವದವ ಸ್ವಂತ ಆಲೋಚನೆಯೇ ಇಲ್ಲ. ಬೇರೆಯವರು ಹೇಳಿದ್ದೇ ಖರೆ ಎಂದು ನಂಬುವವ. ಹೀಗಾಗಿ ನಾವೂ ಅವನ ಬಗ್ಗೆ ಕನಿಕರದಿಂದ ನೋಡುತ್ತಿದ್ದೆವು. ಪಗಡೇ ಸೋಣಗೆ, ಹಸರು ಸೋಣಗೆಕೊಯ್ಯಲು ಹೋದಾಗ ಅವನನ್ನು ಪಂಗಡಕ್ಕೆ ಸೇರಿಸಿಕೊಳ್ಳುತ್ತಿದ್ದೆವು.

ವೆಂಕನಿಗೆ ಈಗ ಸಾಧಾರಣ ಇಪ್ಪತ್ತೆಂಟು ವಯಸ್ಸಾಗಿರಬೇಕು. ಅವನ ಇಪ್ಪತ್ತನೆಯ ವಯಸ್ಸಿನಲ್ಲಿ ಗೈಯ್ಯಲು ಅಣ್ಣ ಒಂದು ಅಡಕೇ ವಖಾರಿಯಲ್ಲಿ ತಂದಿಟ್ಟ.ಮೊದಲು ಪೆದ್ದರ ಹಾಗೆ ಇದ್ದವ ಒಮ್ಮೆಲೇ ಪೇಟೆಯ ಗಾಳಿಗೆಬಿದ್ದು ಸುಧಾರಿಸಿದ. ಜುಟ್ಟು ಮಾಯವಾಯಿತು. ಕ್ರಾಪು ಬಂತು. ಧೋತರ ಉದ್ದವಾಯಿತು. ಸಂಗಡ ಹೇರಆಯಿಲೂ. ತಾನೊಬ್ಬನೇ ಸ್ವಚ್ಛಂದವಾಗಿರ ಬೇಕೆಂದು ಬಯಸಿ ಅಲ್ಲಿಂದ ಧಾರವಾಡಕ್ಕೆ ಹೋಗಿ ನೀರು ಹೊರುವ ಉದ್ಯೋಗ ಹಿಡಿದ ಎರಡು ಮೂರು ಮೈಲಿನಿಂದ ನೀರು ತಂದು ಸರಬರಾಜ ಮಾಡುತ್ತಿದ್ದ. ಆದರಲ್ಲಿ ಸೆಟ್ಟೆ ಮುರಿದು ದುಡಿದ. ಆದರೆ ಅದೂ ಅವನಿಗೆ ಸರಿಬರಲಿಲ್ಲ. ಊರಿಗೆ ಮರಳಿದ. ಯಾವದಾದರೂ ಸ್ವತಂತ್ರ ದಂಧೆ ಮಾಡ ಬೇಕೆಂದು ಬಗೆದು ಕೋಡೀ ಕಟ್ಟೆಯಲ್ಲಿ ಸರಬತ್ತಿನ ಅಂಗಡಿ ತೆರೆದ. ಆದರೆ ಎಲ್ಲರೂ ‘ ನಾಳೆ ಕೊಡ್ತಾ ’ ಎಂದೇ ನುಡಿದುಬಿಟ್ಟರು. ಇವನಿಗೆ ಕಾಸೇ ಬರಲಿಲ್ಲ. ಅಂಗಡಿ ಮುಚ್ಚಿದ. “ ಸುಮ್ನೆ ಊರ ಮೇಲೆ ತಿರುಗೂದಕ್ಕಿಂತ ಮನೆ ಆಡಳತೆ ನೋಡಕೋತ ಸುಮ್ನು ಮನೇಲಿ ಕೂತ್ಕೊ ” ಎಂದು ಅಣ್ಣ ಬರೆದದ್ದೂ ಲಕ್ಷಕ್ಕೆ ಹೋಗಲಿಲ್ಲ. ಮತ್ತೆ ಧಾರವಾಡಕ್ಕೆ ಹಾರಿದ.

ಈ ಬಾರಿ ನೀರು ಹೊರಲು ಹೋಗದೆ ಒಂದು ಚಹಾದಂಗಡಿಯಲ್ಲಿ ಸೇರಿದ. ಬಂದವರಿಗೆ ಚಹಾ ತಿಂಡಿ ಕೊಡುವ ಕೆಲಸ ಮಾಡಿದ. ಆದರೆ ಅವನ ಸಂಬಳ ಅವನ ಶಿಸ್ತಿಗೇ ಸಾಲಲಿಲ್ಲ.

ಹೋಟೆಲಿಗೆ ಬಂದ ಸಾಹೇಬನೊಬ್ಬನ ಜೊತೆಗೆ ಅಡುಗೆ ಭಟ್ಟನಾಗಿ ಹೋದ. ಪಗಾರೇನೋ ಸಾಕಷ್ಟಿತ್ತು. ಆದರೆ ಯಾರ ಕೆಳಗಿರುವದೂ ಅವನಿಗೆ ಒಪ್ಪುತ್ತಿರಲಿಲ್ಲ ಅಡುಗೇ ಭಟ್ಟನನ್ನು ಕೊನೆಗೆ ಹೆಂಗಸರ ವಸ್ತ್ರ ತೊಳೆಯಲೂ ಹಾಕಿದರು. ಆಗ ಮಾತ್ರ ವೆಂಕ ಕಿಡಿಕಿಡಿಯಾಗಿ ಊರಿಗೆ ಬಂದು ಝಾಂಡ್ಯ ಹೊಡೆದ.

ದೊಡ್ಡ ಮನೆಯಿದ್ದರೂ ಅಜ್ಜಿಯೊಬ್ಬಳೇ ಇದ್ದಳು. ಅಜ್ಜಿಯ ಸಂಗಡ ಮನೆಯ ಆಡಳಿತೆಗಾಗಿ ಬಂದು ನಿಂತ. ಅದೇ ವರುಷ ಬೇಸಾಯದ ಕಡೆಗೂ ಅವನ ದೃಷ್ಟಿ ಹರಿಯಿತು. 'ಮೊಗೇವೋಳಿ' ನೆಟ್ಟು ತುಂಬಾ ಮೊಗೇ ಕಾಯಿಗಳನ್ನು ಬೆಳೆಯಿಸಿದ. ಆದರೆ ಅದರಿಂದ ಅಷ್ಟೇನೂ ಆದಾಯವಿಲ್ಲ ವೆಂದು ಒಂದು ವರುಷ ಉಳ್ಳಾಗಡ್ಡೆಯನ್ನು ಬೆಳೆದ. ಆದರೆ ಮನೆಯಲ್ಲಿಯೇ ಉಳಿದ.

ಈ ಹಿಂದಿನ ವರುಷ ವೆಂಕನ ಮದುವೆಯಾಯಿತು. ಹೆಣ್ಣು ನನ್ನ ಸಂಬಂಧಿಕರ ಪೈಕಿಯೇ. ಆಗ ನಾನು ಹೋಗಿದ್ದೆ. "ಇನ್ಯಾವ ಉದ್ಯೋಗ?" ಎಂದು ನಾನು ಅವನನ್ನು ಚುಚ್ಚಿ ಕೇಳಿದೆ. "ಇನ್ಮನೆಲೇ! ಬರೀ ಒಂದೇ ಉದ್ಯೋಗ ಮಾಡಿದರೆ ಎಂತ ಲಾಭ? ಎಲ್ಲಿದ್ರದ್ದೂ ಒಂದೊಂದ ರುಚೀ ನೋಡೊ" ಎಂದು ವೆಂಕ ಹೇಳಿದ. ಆದರೆ ವೆಂಕನಲ್ಲಿ ಒಂದು ಗುಣವಿದೆ. ಯಾವ ಉದ್ಯೋಗ ಹಿಡಿದರೂ ಚೆನ್ನಾಗಿ ಮಾಡುತ್ತಾನೆ. ಆದರೆ ಒಂದೇ ತೆರನಾದ ಉದ್ಯೋಗ ಮಾಡುವ ವ್ಯಕ್ತಿಯಲ್ಲ ಅದು. ವರ್ಷಕ್ಕೊಂದರಂತೆ ಮಾಡುತ್ತ ಹೋಗುವದರಲ್ಲೇ ಏನೋ ಮಜಾಕಂಡು ಕೊಂಡಿರಬೇಕು. ಈಗ ಮನೆಯಲ್ಲಿ ಒಂದು ಎಮ್ಮೆ ಸಾಕಿದ್ದಾನೆ. ಅದರ ಹಾಲು ಮಾರಾಟ ಮಾಡು ತ್ತಾನೆ. ಒಮ್ಮೊಮ್ಮೆ ಭತ್ತದ ವ್ಯಾಪಾರವನ್ನೂ ಮಾಡುತ್ತಾನೆಂದು ಸುದ್ದಿ. ಬೇರೆ–ಬೇರೆ ಕೆಲಸ ಮಾಡುತ್ತಿದ್ದರೂ ಅಂತೂ ಮನೆಯಲ್ಲೇ.

---

# ಕ್ರಾಂತಿಕಥೆ



ಭಾರತದ ಮೂಲೆಮೂಲೆಯಲ್ಲಿ 'ಕ್ರಾಂತಿ' ಯೆಬ್ಬಿಸಿದ ನಲವತ್ತೆರಡರ ಚಳವಳಿ ನಮ್ಮೂರಿಗೂ ಬಾರದೇ ಇರಲಿಲ್ಲ. ಎಲ್ಲಾ ಕಡೆಗೆ ಕ್ರಾಂತಿಕಾರರಿರುವಾಗ, ಎಲ್ಲವುದರಲ್ಲೂ ಮುಂದುವರಿದ ನಮ್ಮೂರಿನಲ್ಲಿ ಇರದಿದ್ದರೆ ಹೇಗೆ? ಧಾರವಾಡದಲ್ಲಿ ಕಲಿಯುತ್ತಿದ್ದ ನಾರಾಯಣ ಬಂದ. ನಮ್ಮ ತಂದೆಯವರ ಮಾತಿನಲ್ಲಿ ಹೇಳುವದಾದರೆ "ಕಿವೀಲಿ ಗಾಳಿ ಹೊಕ್ಕಿಬಂದ." ಮರುದಿನವೇ ನಮ್ಮೆಲ್ಲರ ಒಂದು ತಂಡ ಸಿದ್ಧಪಡಿಸಿ ಅದಕ್ಕೆ ತಾನು ಮುಖಂಡನಾದ.

ಈ ಚಳವಳಿಯಲ್ಲಿ ಪ್ರತಿಯೊಬ್ಬರೂ ಶ್ರದ್ಧೆಯಿಂದ ಕೆಲಸಮಾಡಿ ಹಳ್ಳಿಯಲ್ಲಿ ಅಭೂತ ಪೂರ್ವವಾದ ಕ್ರಾಂತಿಯನ್ನು ಹಬ್ಬಿಸಬೇಕೆಂದು ಸೂಚಿಸಿದ ಅದರಂತೆ ನಾವು ಒಪ್ಪಿದೆವು. ಬೆಳಗಿಡೀ ಕರಪತ್ರ ಸಿದ್ಧಮಾಡಿ ಕೊಡುತ್ತಿದ್ದ. ಅದನ್ನು ರಾತ್ರಿ ನಾವು ಹಚ್ಚಿಬರಬೇಕಾಗುತ್ತಿತ್ತು.

ನಮ್ಮೂರ ಶಾನಭಾಗರ ಮನೆಗೆ 'ಕೂಡಲೇ ರಾಜೀನಾಮೆ ಕೊಡದಿದ್ದರೆ ನಿಮ್ಮ ಮನೆಗೆ ಬೆಂಕೀ ಹಚ್ಚಲಾಗುವದೆ'ಂದು ಕರಪತ್ರ ಕೊಟ್ಟು ಬಂದೆವು. ಅವರು ಗಾಬರಿಯಿಂದ ಕುಮಟೆ ಕಚೇರಿಗೂ ಮನೆಗೂ ಐದು ಬಾರಿ ಸುತ್ತಾಡಿದರು.

ಇನ್ನು ಈ ರೀತಿ ಪ್ರಯೋಜನವಿಲ್ಲ, ವಿಧ್ವಂಸಕ ಚಟುವಟಿಕೆ ಆರಂಭಿಸಬೇಕೆಂದು ನಾರಾಯಣ ಸೂಚಿಸಿದ. ರಾತ್ರಿ ನಾವೆಲ್ಲ ಕೂಡಿ ಆಲೋಚಿಸಿದೆವು. ಮೊದಲನೆಯದಾಗಿ ನಮ್ಮೂರ ಹಟ್ಟೀಕೊಟ್ಟಿಗೆಯ ಬೋರ್ಡು ಸುಟ್ಟೆವು. ಎರಡನೇ ದಿನ ಲೋಕಲ್ ಬೋರ್ಡಿನವರು ವ್ಯವಸ್ಥೆಮಾಡಿದ ಲಾಟನ್‌ಕಂಬಗಳನ್ನುರುಳಿಸಿದೆವು. ಕೂಡಲೇ ಜನರಲ್ಲಿ ಒಮ್ಮಿಂದೊಮ್ಮೆ ಕ್ರಾಂತಿಯಾಯಿತು.

"ಓಯ್! ನಮ್ಮೂರಲ್ಲೂ ಕ್ರಾಂತಿಯಾಯಿತು" ಎಂದು ಎಲ್ಲರೂ ಆಡಿ ಕೊಳ್ಳಹತ್ತಿದರು.

ಊರ ಶಾನಭಾಗ ಪಟೇಲರು ಪೋಲೀಸರಿಗೆ ರಿಪೋರ್ಟು ಕೊಟ್ಟರು. ನಾರಾಯಣ ದಾರಿಯಲ್ಲಿ ಹೋಗುತ್ತಿರುವಾಗ ಒಮ್ಮಿಂದೊಮ್ಮೆ ಒಬ್ಬ ಪೋಲೀಸ ಸಾಯ್ಕಲ್ಲಿನ ಮೇಲೆ ಬಂದಿಳಿದ. ಅವನೆದೆ ಡವಡವ ಎಂದು ಹೊಡೆದುಕೊಳ್ಳುತ್ತಿತ್ತು.

ಲಂಗೋಟಿಯನ್ನುಟ್ಟುಕೊಂಡು ಹೋಗುತ್ತಿದ್ದ ಇವನನ್ನು ತಡೆದು ಕೇಳಿದ "ನಾರಾಯಣ ಭಟ್ಟ ಅಂದರೆ ಯಾರು? ಅವನ ಮನೆಯೆಲ್ಲಿ?" ಇತ್ಯಾದಿ ನಾರಾಯಣನಿಗೆ ತನ್ನ ಮೇಲೆ ವಾರಂಟಿದೆಯೆಂದು ತಿಳಿದು ಹೋಯಿತು. ಅವನು ಎಲ್ಲೋ ದೂರದ ಮನೆಯನ್ನು ತೋರಿಸಿ, ಗದ್ದೇ ದಾರಿಯಿಂದ ಓಡಿಬಂದು ಮನೆಸೇರಿ, ಅಲ್ಲಿದ್ದ ಕರಪತ್ರ ಎಲ್ಲಾ ತೆಗೆದುಕೊಂಡು ಹೋಗಿ ನಮ್ಮ ಮನೆಯ ಬೇಲೆಯ ಮೇಲೆ ಹುಗಿದು ಆಚೇಮನೆಯ ಹುಲ್ಲಟ್ಟಕ್ಕೆ ಹೋಗಿ ಕುಳಿತ.

ಊಟ ಆಸರಿ ಎಲ್ಲಾ ಅಲ್ಲೇ ಸಪ್ಲಾಯ ಮಾಡಲಾಯಿತು. ಪೋಲೀಸ ಶಾನಭಾಗರನ್ನು ಕರೆದುಕೊಂಡು ಬಂದು ಮನೆಯನ್ನೆಲ್ಲ ಹುಡುಕಿಸಿದ. ನಾರಾಯಣ ಎಲ್ಲಿದ್ದಾನೆಂದು ಗದರಿಸಿದ. "ಯೆನಗೆಂತಲೂ ಗೊತ್ತಿಲ್ಲೆ" ಎಂದು ಅಜ್ಜಿ ಉತ್ತರವಿತ್ತಳು. ಅವರು ಹೊರಟುಹೋದರು.

ನಾರಾಯಣ ಹುಲ್ಲಟ್ಟದಿಂದ ಕೆಳಗಿಳಿದು ಬಂದು ವಸ್ತ್ರವನ್ನೆಲ್ಲಾ ಹಾಕಿಕೊಂಡು ಕೈಚೀಲ ತೆಗೆದುಕೊಂಡು ಬೇರೆಯ ಕಡೆಗೆ ಹೊರಟ. ಇಲ್ಲಿದ್ದರೆ ಯಾವ ಕೆಲಸವೂ ಶಕ್ಯವಿಲ್ಲವೆಂದು ಆತ ನಿರ್ಧರಿಸಿದ.

ಅವನು ಹೋದಕೂಡಲೇ ಕ್ರಾಂತಿಯೂ ನಿಂತಿತು. ನಾವು ಸುಮ್ಮನಾದೆವು. ಆದರೆ ಈಗ ಮಾತ್ರ ನಾವೂ ಹಾಗೆ ಮಾಡಿದೆವು ಎಂದು ಹೇಳಿಕೊಳ್ಳುವಷ್ಟು ಇತಿಹಾಸ ಇದೆ. ಅದೇ ನಮಗೆ ಹೆಮ್ಮೆ.

ಅಜ್ಜಿಯೊಬ್ಬಳು ಹೇಳುತ್ತಿದ್ದಳು 'ಅಲ್ಲದೆ ಆ ನಾರಾಯಣಂಗೆಂತಾ ಹೋಕ್ಣೆಕಾಲಬಂಜನೆ. ಸರಕಾರಕ್ಕೆ ಅನ್ಯಾಯಾ ಮಾಡ್ತ ತಿರಗ್ತನಡ್ಡ. ಅವಂಗೆಯಂತ ದೇವ್ರು ಸುಖಾ ಕೊಡ್ತಾ."

---

# ಸುಬ್ಬಬ್ಬೆ !

ಸುಬ್ಬಬ್ಬೆಯ ಜೀವನ ಒಂದು ಕರುಣಕಾವ್ಯದಂತಿದೆ. ನಾನವಳನ್ನು ನೋಡಿಲ್ಲವಾದರೂ ಅವಳ ಬಗೆಗೆ ಅನೇಕಜನ ಅನೇಕತೆರನಾಗಿ ಹೇಳು ವದನ್ನು ಕೇಳಿದ್ದೇನೆ. ಅವಳು ಸುಖವನ್ನೇ ಕಾಣಲಿಲ್ಲವಂತೆ. ಕಷ್ಟ ವನ್ನುಂಡು ಅವಳಿಗೆ ಅನುಭವವಾಗಿ ಹೋಗಿತ್ತಂತೆ. ನಾ ಕೇಳಿದ ಅವಳ ಕತೆ ಇಲ್ಲಿ ವಿವರಿಸಿರುವೆ.

ಅವಳದೊಂದು ಮಹಾ ಸಾಹಸದ ಜೀವನ ಎಂದೂ ಯಾರಿಗೂ ಹೆದರ ದವಳಲ್ಲ. ಸ್ವತಃ ತನ್ನ ಪತಿಯ ಬೆದರಿಕೆಗೆ ಸಹ ಕಿವಿಗೊಟ್ಟವಳಲ್ಲ. ಪತಿ ಅಡ್ಡದಾರಿ ಹಿಡಿಯುತ್ತಿರುವದನ್ನು ಲಕ್ಷಿಸಿ ಅವಳು ಅವನನ್ನು ಹಾಗೆ ಹೋಗ ಗೊಡದಂತೆ ಅಡ್ಡಗಟ್ಟಿದ್ದಳು.

"ಥೂ....ರಂ....ಗಂಡಸ್ರ ಪಂಚಾಯ್ತಿಗೆ ನಿನಗ್ಯೆಂತಕ್ಕೆ. ನಿನ್ನ ಕೆಲ್ಸ ಎಷ್ಟಿದ್ದು ಅಷ್ಟನೀ ನೋಡ್ಕೊ" ಎಂದು ಗಂಡ ಗದರಿಸಿದರೂ ಅವಳು ಕೇಳ ಲಿಲ್ಲ.

"ಅಡ್ಡದಾರಿಗಿನ್ನೊವ್ಮೆ ಹೋದ್ರೆ ಯಾಂ ಹೊಳೆಕೆರೇಲಿ ಬಿದ್ದು ಸತ್ಕಂಡ್‌ಬಿಡ್ತಿ" ಎಂದಳು.

ಆದರೂ ಅವನು ಕೇಳಲಿಲ್ಲ. ಅವಳು ಬಾಗಿಲಿಗೆ ಅಡ್ಡಬಂದು ನಿಂತಳು. ಅವನಿಗೆ ಕೋಪ ತಡೆಯದಾಯಿತು. ಕೂಡಲೇ ಒಳಗೆ ಹೋಗಿ ಗರಟೆ ಯನ್ನು ಕತ್ತಿಸಿ ಅವಳ ಕಾಲ ಮೇಲೆ ತಂದು ಬರೆ ಇಟ್ಟುಬಿಟ್ಟ. ಅವಳು ಅಯ್ಯೋ ಎಂದು ಚೀರಿ ಬಿದ್ದಳು. ಸಾಯುವ ವರೆಗೂ ಅವಳ ಕಾಲ ಮೇಲೆ ಆ ಕರಿಯ ಗುರುತು ಇದ್ದೇ ಇತ್ತು !

ಅವಳ ಇಪ್ಪತ್ತಾರನೆಯ ವರುಷದಲ್ಲೇ ಗಂಡ ತೀರಿಕೊಂಡ. ಪತಿಯ ಮರಣದ ನಂತರ ಅವಳು ಬಹಳಷ್ಟು ಕಷ್ಟ ಅನುಭವಿಸಬೇಕಾಯಿತು. ಇವಳ ಪತಿಯ ಅಣ್ಣ ಇವಳನ್ನು ಬಹಳಷ್ಟು ಕಾಡಿದ. ಅಣ್ಣನ ಹೆಂಡತಿ ಎಲ್ಲಾ ಕೆಲಸದ ಭಾರ ಇವಳ ಮೇಲೆ ಹೇರಿದಳು

ಗಂಡ ಸತ್ತ ಮೇಲೆ ಸುಬ್ಬಿ 'ತಲೆ' ಮಾಡಿಸಿಕೊಳ್ಳಲಿಲ್ಲವೆಂದು "ಹಾದರಗಿತ್ತಿ" ಎಂಬ ಆಪಾದನೆಗೆ ಗುರಿಯಾದಳು. ಆದರೆ ಅವಳದು ಶುದ್ಧ ಪವಿತ್ರ ಜೀವನವಾಗಿತ್ತು. ಕೊನೆಯ ವರೆಗೂ ಪವಿತ್ರಜೀವನವನ್ನೇ ನಡೆಸಿದಳು. ಎಷ್ಟೋ ಜನ ಪೋಲಿಗಳು ಅವಳ ಹಿಂದು ಮುಂದೆ ಸುಳಿದಾಡಿದರು. ದೂರದಲ್ಲಿ ನಿಂತು ಅವಳ ಬಗ್ಗೆ ಮಾತನಾಡಹತ್ತಿದರು. ಆದರೆ ಒಮ್ಮೆ ಅವಳಿಂದ ಬೈಗಳ ತಿಂದ ಮೇಲೆ ತಿರುಗಿ ಅವಳ ಸುದ್ದಿಗೆ ಬರಲಿಲ್ಲ.

ಸುಬ್ಬಬ್ಬೆಯದು ಅತ್ಯಂತ ಸಾಹಸ ಜೀವನ. ಬೆಳಿಗ್ಗೆ ಕೋಳಿ ಕೂಗುವ ಮುಂಚೇ ಎದ್ದು ಇಡೀ ಮನೆಯನ್ನು ಗುಡಿಸಿ ಸ್ವಚ್ಛ ಮಾಡುವಳು. ನಂತರ ಕೊಟ್ಟಿಗೆಯ ಸಗಣಿ ತೆಗೆಯುತ್ತಿದಳು. ನಂತರ ಸ್ವಲ್ಪ ಅಸರಿ ಕುಡಿದು ಕರ್ಕೀ ಬಳ್ಳಿಯನ್ನು ತೆಗೆದುಕೊಂಡು 'ಕರ್ಕಿ ಜಡ್ಡು' ತರಲು 'ಗಜ್ನಿ ಕಂಟ'ಕ್ಕೆ ಹೋಗುತ್ತಿದ್ದಳು. ಅವಳಿಗೆ ಈಸಲು ಗೊತ್ತಿತ್ತು. ಕುತ್ತಿಗೆಮಟ ನೀರು ಬರುವವರೆಗೂ ಗಜನಿಯಲ್ಲಿ ಅವಳು ಹೋಗಿ ಅಲ್ಲಿ ಬೆಳೆಯುವ ಕರ್ಕಿಯನ್ನು ತರುತ್ತಿದ್ದಳು. ಅವಳ ಸಂಗಡ ಊರಿನ ಇತರ ಹೆಂಗಸರೂ ಹೋಗುತ್ತಿದ್ದರು.

ಮೊದಲು ಇವಳು ಹೊರಟು ನಾಗಜ್ಜಿ-ಗಣಪಬ್ಬೆ-ಗಂಗಕ್ಕ ಮುಂತಾದವರನ್ನೆಲ್ಲ ಕರೆದುಕೊಂಡು ಹೋಗುತ್ತಿದ್ದಳು. "ಸುಬ್ಬಿದ್ರೆ ಹೆದ್ರಕ್ಯೇ ಇಲ್ಲೆ" ಎಂದು ಹೇಳುವದು ಹೆಂಗಸರ ರೂಢಿಯಾಗಿತ್ತು.

ಒಮ್ಮೆ ಗಜನಿಯಲ್ಲಿ ಕರ್ಕೀ ತರಲು ಹೋದಾಗ ದೋಣಿ ಕಮಚಿ ಒಬ್ಬ ಬಿದ್ದ. ಕೂಡಲೇ ಸುಬ್ಬಿ ಈಜುತ್ತ ಹೋಗಿ ಅವನನ್ನು ತೆಗೆದು ಹಾಕಿದ್ದಳು. ಅವಳು ಕರ್ಕಿಗೆ ಹೋಗುವಾಗ ದೋಣಿಗೀಣಿ ಏನೂ ಬೇಕಾಗುತ್ತಿರಲಿಲ್ಲ.

ಕಟ್ಟಿಗೆಯನ್ನು ತರಲು ಪ್ರತಿಸಲವೂ ಅವಳೇ 'ಕುಂಟ್ರಕುಣಿ'ಗೆ ಹೋಗುತ್ತಿದ್ದಳು. ಉಪ್ಪಿನ ಮಣ್ಣನ್ನು ತಂದು ತಾನೇ ಉಪ್ಪು ತಯಾರು ಮಾಡುತ್ತಿದ್ದಳು. ಬಿದ್ದ ಗೇರಬೀಜಗಳನ್ನು ಹೆಕ್ಕಿ ಸುಮಾರು ಐದಾರು ಕೊಳಗದಷ್ಟು ಮಾಡುತ್ತಿದ್ದಳು. ಮುರುಗಲ ಹಣ್ಣನ್ನು ಒಡೆದು ಅದರ ಸಪ್ಪನ್ನು ತಂದು ಒಣಗಿಸಿಡುತ್ತಿದ್ದಳು. ಈ ರೀತಿಯಾಗಿ ಮನೆಮಾಡುವದರಲ್ಲಿ ಅವಳು ಬಹಳ ಗಟ್ಟಿ.

ಯಾವ ತರದ ಸಂತೋಷ ಸಮಾರಂಭದಲ್ಲಿ ಭಾಗ ವಹಿಸದಿದ್ದರೂ ಎಲ್ಲಾದರೂ ಅಪರೂಪವಾಗಿ ದಶಾವತಾರ ಆಟಕ್ಕೊಂದು ಹೋಗುತ್ತಿದ್ದಳು.

ಇತರ ಹೆಂಗಸರಂತೆ ಊರಿನ ಯಾವ ಪಂಚಾಯ್ತಿಗೆಯಲ್ಲೂ ಅವಳು ಕೈ-ಹಾಕುತ್ತಿರಲಿಲ್ಲ. ತಾನಾಯಿತು, ತನ್ನ ಕೆಲಸವಾಯಿತು.

ಬೇರೆಯವರಿಗೆ ಕಷ್ಟ ಬಂದಾಗ ಅದು ತನ್ನ ಕಷ್ಟವೆಂದೇ ತಿಳಿದು ಅವಳು ಮಾಡುತ್ತಿರುವ ಕೆಲಸದ ಬಗ್ಗೆ ಅನೇಕಾನೇಕ ಕತೆಗಳಿವೆ. ಮದ್ದಿನ ಬೇರು ಮೊದಲಾದವುಗಳು ಅವಳಿಗೆ ಗೊತ್ತಿರುವದರಿಂದ ಯಾರಿಗಾದರೂ ಏನಾದರೂ ಶೀಕಾದರೆ ಬೇರು ತರಲು ಇವಳನ್ನೇ ಕಳಿಸುತ್ತಿದ್ದರು. ಅವರು ಕರೆಕಳಿಸದಿದ್ದರೂ ಇವಳೇ ಹೋಗುತ್ತಾಳೆ. ಕೆಲವು ಮದ್ದಿನ ಬೇರು ಯಾವಾಗಲೂ ಅವಳ ಸೀರೆಯ ಸೆರಗಿಗೆ ಕಟ್ಟಿಕೊಂಡೇ ಇರುತ್ತಿದ್ದವು.

ಈ ರೀತಿಯಾಗಿ ಅವಳ ಜೀವನವಿದ್ದರೂ ಕೆಲವು ಜನ ತಮಾಸೆಯನ್ನು ತೀರಿಸಲು ಅವಳು ಒಪ್ಪುವದಿಲ್ಲವೆಂದು ಅವಳ ಬಗ್ಗೆ ನಾನಾತರದ ಅಪಪ್ರಚಾರಕ್ಕೆ ತೊಡಗಿದ್ದರು. ಅವಳು ಯಾರನ್ನೋ ಮಿಂಡನನ್ನು ಮಾಡಿಕೊಂಡಿದ್ದಾಳೆಂದು ಹಲವರು ಹೇಳುತ್ತಿದ್ದರು. ಒಮ್ಮೆಯಂತೂ ಅವಳು ಗರ್ಭಿಣಿಯೆಂದು ಪ್ರಚಾರ ಹುಟ್ಟಿಸಿಬಿಟ್ಟಿದ್ದರು. ಅವಳು ಮುಂಡೆ ತೆಗೆಯಿಸದ್ದೇ ಇದಕ್ಕೆ ಕಾರಣ. ಆದರೆ ಅವಳು ಮಾತ್ರ ತನ್ನ ಕೆಲಸದಲ್ಲಿ ತಾನುಳಿದಳು.

"ಬಸ್ರಾದರೆ ಕಾಂಗಲಿ ಮುಂದೆ......" ಎಂದು ಹೇಳಿ ಸುಮ್ಮನಾದಳು

ಅಪಪ್ರಚಾರ ಮಾಡತೊಡಗಿದವರಿಗೆ ಕೆನ್ನೆಯ ಮೇಲೆ ಹೊಡೆದಹಾಗಾಯಿತು. ಕೊನೆಗೆ ತಪ್ಪಿಸಿಕೊಳ್ಳಲು ಅವಳೇನೋ ಔಷಧಿ ತೆಗೆದುಕೊಂಡಿರಬೇಕು ಎಂದು ಮಾತನಾಡಹತ್ತಿದರು ಆದರೆ ಜನತೆಗೆ ಮಾತ್ರ ಅವಳಲ್ಲಿ ವಿಶ್ವಾಸ ಉಂಟಾಯಿತು. ಅವಳು ಗೈಯ್ಯುತ್ತಿರುವದನ್ನು ನೋಡಿ ಕನಿಕರವೂ ಉಂಟಾಯಿತು.

ಅವಳ ಕೊನೆ ಕಷ್ಟದಲ್ಲೇ ಆಯಿತೆಂದು ಕೇಳಿದ್ದೇನೆ. ಆಷಾಢಮಾಸವಾದರೂ ಅವಳು ಕರ್ಕಿ ತರಲು ಗಜನಿಗೆ ಹೋಗಿ ನೀರಿನ ಸೆಳವಿಗೆ ಸಿಕ್ಕಿ ತೇಲಿ ಹೋವಳಂತೆ. ಅವಳ ಹೆಣವನ್ನೂ ನೋಡಲಿಲ್ಲವಂತೆ. ಅವಳ ಸಂಗಡ ಹೋದ ಒಬ್ಬಿಬ್ಬರು ಮಾತ್ರ "ಸುಬ್ಬಬ್ಬೆ ಗಜನಿಗೆ ನೆಗಸು ಬಂದಾಗ ನೀರ್ನ ಜೋರಿಗೆ ಸಿಕ್ಕು ಬಳ್ದ್ ಹೋದ್ಳು" ಎಂದು ಉಸುರಿದರು.

---

# ರಾತ್ರಿಶಾಲೆ



ಕೊನೆಗೊಮ್ಮೆ ಅಂತೂ ಮಾಸ್ತರರು ಹಾವಳಿಕೆ ತೆಗೆಯುತ್ತಾ ಅಭ್ಯಾಸ ಮುಗಿಸಿ ಒಳಗೆ ಹೋಗಿ ಮಲಗಿಕೊಂಡರು. ಹುಡುಗರೂ ತಮ್ಮ ತಮ್ಮ ಹಾಸಿಗೆ ಬಿಡಿಸಿಕೊಂಡರು. ಆಗಲೇ ರಾತ್ರಿ ಹತ್ತು ಘಂಟೆಯಾಗಿರಬೇಕು. ಮುಲ್ಕೀ ಪರೀಕ್ಷೆ ಸಮೀಪವಾದ್ದರಿಂದ ಹಿಂದುಳಿದ ಅಭ್ಯಾಸ ಭರ್ತಿಮಾಡಲು ಅಣ್ಣಯ್ಯಮಾಸ್ತರರು ರಾತ್ರಿಶಾಲೆ ಸುರು ಮಾಡಿದ್ದರು ತೂಕಡಿಕೆ ಬರುವ ವರೆಗೆ ಕಂಠಶೋಷಣೆ ಮಾಡಿಕೊಂಡು ಒಳಗೆ ಹೋಗಿ ಕುಂಭಕರ್ಣನ ಧ್ಯಾನ ದಲ್ಲಿ ಮಗ್ನರಾಗುತ್ತಿದ್ದರು. ಅವರು ಒಳಗೆ ಹೋದನಂತರ ಇತ್ತ ಹುಡುಗರು ಶಾಲೆ ಅಂಗಳದಿಂದ ಜಿಗಿದು ತಿಂಡಿಯ ಬೇಟೆಗೆ ಹೊರಡುತ್ತಿದ್ದರು. ಇಂದು ಎಲ್ಲರೂ ‘ ಸಂಕ್ರ್ಯಾ ’ನ ಹಿತ್ಲಿಗೆ ಬೊಂಡಗಾಯಿ ಕೊಯ್ಯಲು ಹೋಗಬೇಕೆಂದು ನಿಶ್ಚಯಿಸಿದ್ದರು. ಮಾಸ್ತರ್ರು ಒಳಗೆ ಹೋದುದೇ ತಡ ಗೊರಕೆ ಶಬ್ದ ಕೇಳಿಸಿತು.

“ ಹೋಪ್ರೋ ಏಳ್ರೊ ಮಾಸ್ತರ್ರು ಕುಂಭಕರ್ಣನ ಜಪಕ್ಕೆ ಹಣಕದ್ರು ” ಎಂದು ಲಕ್ಶಣ್ಣ ಮೆಲ್ಲನೆ ಹೊರಟ. ಅವನ ಹಿಂದೆಯೇ ಸುಬ್ಬ, ದತ್ತ, ಪಾಚ ಮುಂತಾದವರು ನಡೆದರು. ಗದ್ದೆ ಬಯಲಿನಲ್ಲಿ ಹೋಗುವಾಗ ಹೆಸರ ಸೋಣಗೆ ನೋಡಿ ಪಾಚಭಟ್ಟನ ಬಾಯಲ್ಲಿ ನಿರೂರಿತು. ಎಲ್ಲರಿಗಿಂತ ಹಿಂದು ಳಿದು ಹಸಿ ಹಸಿ ಹೆಸರ ಸೋಣಗೆಯನ್ನೇ ಜಗಿಯಹತ್ತಿದ ಅವನು ಜಗಿಯು ವದನ್ನು ನೋಡಿ “ ಹೊಟ್ಟೆಕಚ್ಚಸಾಯ್ವೆ ಸತ್ತನ್ನೆ ತಿನ್ನಡದೋ ” ಎಂದು ಕೂಗಿಕೊಂಡ ಲಕ್ಶಣ್ಣ. ಆದರೆ ಅವನ ಬಾಯಲ್ಲೂ ನೀರೂರದೆ ಇರಲಿಲ್ಲ.

“ ನಾಕ ಹೆಸರ ಸೋಣಗೆ ಆದ್ರೂ ಸುಡುವನೋ ” ಎಂದ ದತ್ತಭಟ್ಟ ಮೆಲ್ಲನೆ.

“ ಕಡ್ಡೀ ಪೊಟ್ನ ಹೇಗೂ ಈತು ಸುಡೂಕಾದ್ರೂ ಸುಡುವ ” ಎಂದ ಸಿಂಗನ ಹಿರಿಯ ಕೋಸ.

“ ಬಳಿಕ ಕೇಳುವದೇನು ? ಹಾಳೀ ಕಂಟಕ್ಕೆ ವಟ್ಟಿ ತೋಡಿ ಆಜು ಬಾಜು ಇದ್ದ ಬಿದ್ದ ತೆರಕೆಲ್ಲಾ ಕೂಡಿಸಿ, ವಟ್ಟೆಬಾಯ ಮೇಲೆ ಸಣ್ಣ ಸಣ್ಣ

'ಕೊಚ್ಚು' ಇಟ್ಟು ಅದರ ಮೇಲೆ ಹೆಸರಸೋಣಿಗೆ ಹರವಿ ಕೆಳಗಿನಿಂದ ಬೆಂಕಿ ಹಿಡಿಸಿದರು. ಬೆಂಕಿಯ ಶಕೆಗೆ ಅದು ಬಂದ ಮೇಲೆ ಅದನ್ನು ಸುಲಿದು ತಿನ್ನುತ್ತ ಹುಡುಗರ ತಂಡ ಬೊಂಡಗಾಯಿ ಆಸೆಗೆ ಸಂಕ್ರೂನ ಹಿತ್ತಿಗೆ ಹೊರಟಿತು.

ಲಕ್ಕಣ್ಣ ಕಪಿಯಂತೆ ಸರಸರನೆ ತೆಂಗಿನಮರ ಹತ್ತಿ, ಒಜ್ಜೆಯಾದುದನ್ನೆಲ್ಲಾ ಒಂದೊಂದಾಗಿ ಚೊಟ್ಟು ತಿರುಪಿ ಹಾಕಿದ. ಸುಮಾರು ಎಂಟು ಕಾಯಾಗಿರಬಹುದು. ಇನ್ನು ಎರ ಕೊಡುಯ್ದರೆ ಅವರ ಒಬ್ಬೊಬ್ಬರ ಪಾಲಿಗೆ ಒಂದೊಂದು ಬರುತ್ತಿತ್ತು. ಆವರೆ ತೋಟದ ತುದಿಯ ಗುಡಿಸಲ ಹತ್ತರ ಮಲಗಿದ್ದ ಸಂಕ್ರೂಗೆ ಒಮ್ಮೆಲೇ ಎಚ್ಚರವಾಯಿತು. ಯಾರೋ ಕಾಯಿ ಕಳಲು ಬಂದಿದ್ದಾರೆಂದು ಅಲ್ಲೇ ಬಿದ್ದ ಹೆಡೇಪೆಂಟಿಯೊಂದನ್ನು ತೆಗೆದುಕೊಂಡು "ಹಡ್ಸೇ ಸೂ....ಮಕ್ಕಳ್ರಾ. ಸೊಂಟದ ಕೀಲ ತಪ್ಸಕೊಡ್ತೆ" ಎಂದು ಕೂಗುತ್ತಾ ಓಡಿಬಂದ. ಕೂಡಲೇ ಅಲ್ಲಿದ್ದ ಹುಡುಗರು ಬೊಂಡಗಾಯಿ ಬಿಟ್ಟೀ ಸತ್ತ್ರೂಬಿದ್ದು ಓಡಿಹೋದರು. ಮರ ಹತ್ತಿದ ಲಕ್ಕಣ್ಣನ ಪೇಚಾಟ ಮಾತ್ರ ಹರಡಿಹೋಯಿತು.

"ಶಾಲೇಲ ಅಭ್ಯಾಸ ಮಾಡೂಕ ಬಂದವ ಬೊಂಡಗಾಯಿ ಕಳೂಕ ಬಂದೀದ್ಯೋ. ಗನಾಮಾತ್ನಲ್ಲೀಗ ಕೆಳ್ಗ ಇಳೀತ್ಯೋ ಕಾಲ ತಟ್ಟಿ ಎಳೀಲೋ" ಎಂದು ಒದರಿದ ಸಂಕ್ರು.

ಲಕ್ಕಣ್ಣನ ಎದೆ ಧಸ್ ಎಂದರೂ, ಅವನೂ ಮಾ 'ಹಂಡಬೆರಕೆ' "ನೀ ಕೆಳಗೆ ಬರ್ಲಿಕ್ಕೆ ಒಂದ್ ಬಾ. ನಿನ್ನ ತಲೆ ಮೇಲೆ ಬೊಂಡಗಾಯಹಾಕತೆ!" ಎಂದ ಲಕ್ಕಣ್ಣ. ಅದನ್ನು ಕೇಳಿ ಸಂಕ್ರು ಸ್ವಲ್ಪ ದೂರ ಸರಿದೇ ನಿಂತ. ಎಷ್ಟು ಮಾಡಿದರೂ ಲಕ್ಕಣ್ಣ ಬೇರೆ ಕೆಳಗಿಳಿದು ಬರಲಿಲ್ಲ. ಕೊನೆಗೆ "ನಿಮ್ಗ ಹೀಂಗಲ್ಲ. ಯಾವ್ದಾ ಮಾಸ್ತರ‍್ರತ್ರೀ ಹೋಗಿ ಹೇಳ್ತೆ" ಎಂದು ಅಲ್ಲಿಂದ ಹೊರಟುಹೋದ. ಅವನು ಕಣ್ಮರೆಯಾದುದೇ ತಡ ಲಕ್ಕಣ್ಣ ಸರಸರನೆ ಮರ ಇಳಿದು ಶಾಲೆಗೆ ಬಂದು ಮುಸುಕಲು ಹಾಕಿಕೊಂಡು ಮಲಗಿಬಿಟ್ಟ.

ಸುಂಕ್ರು "ಮಾಸ್ತರ‍್ರೆ–ಮಾಸ್ತರ‍್ರೆ" ಎಂದು ಬಂದು ಕೂಗಿಕೊಂಡ. ಇವ ಯಾವ ಶನಿಯಪ್ಪಾ ಎಂದು ನಿದ್ದೆಗಣ್ಣಿನಲ್ಲೇ ಬಂದು ಬಾಗಿಲು ತೆಗೆದರು ಅಣ್ಣಯ್ಯಮಾಸ್ತರರು.

" ಯಾರೋ ಅವ, ರಾತ್ರೆಯಾಕ ಬಂದಿದ್ಯೋ "

" ನಾನು ಒಡ್ಯಾ. ಸುಂಕ್ರಾ. ನೋಡಿ—ನಿಮ್ಮ ಶಾಲಿ ಕಲೂಕ ಬಂದ ಪೋರ್ಗ್ಳು ನಮ್ಮ ಹಿತ್ಲೀಗೆ ಬೊಂಡಗಾಯಿ ಕಳೂಕ ಬಂದು ಸಣ್ಣ ಸಣ್ಣ ಮಿಳ್ಳೆ ಎಲ್ಲಾ ಹರದ್ಹಾಕದ್ರು. ಹೀಂಗ್ಯಾಕ ಮಾಡದ್ರಿ ಎಂದರೆ ನನಗೇ ಜೋರ ಮಾಡದ್ರು. ಅವ್ರಿಗೆ ತೋರ್ಸ್ತಿದ್ದೆ ಕೈ—ಯಾಕೆ ನಿಮ್ಗ ಏನಾದ್ರೂ ಒಂದ ಮಾತ ಕೇಳ್ಬ ಹೇಳ ಸುಮ್ಮನುಳಿದೆ. ಈಗ ನೀವೇ ಏನ ನಿಕಾಲಿ ಮಾಡತ್ರೋ ಪಟೇಲ್ರ ಹತ್ರ ಹೊಗ್ಲೋ? ಇನ್ನೆಷ್ಟದಿನ ನಮ್ಮ ಹಿತ್ಲಿಗೆ ಕಳೂಕ ಬಂದಿದ್ರೋ ಏನೊ " ಎಂದು ಪುರಾಣವನ್ನೇ ಬಿಚ್ಚಿದ.

ಇದೆಲ್ಲಿ ಬಂತಪ್ಪಾ ಗ್ರಹಚಾರ ಎಂದುಕೊಂಡರು ಮಾಸ್ತರರು. " ನಾಳೆ ಬಾರೋ ಎಲ್ಲಾ ನಿಕಾಲಿ ಮಾಡ ಹಾಕ್ವಾ " ಎಂದು ಹೇಳಿ ಸಮಾಧಾನ ಮಾಡಿ ಕಳಿಸಬೇಕಾದರೆ ಏಳುಹನ್ನೊಂದಾಯಿತು ಅಣ್ಣಯ್ಯಮಾಸ್ತರರಿಗೆ.

ಮರುದಿನ ಬೆಳಿಗ್ಗೆ ಶಾಲೆ ಹುಡುಗರೆಲ್ಲಾ ಬಂದ ಮೇಲೆ ಅಣ್ಣಯ್ಯ ಮಾಸ್ತರರ ವಿಚಾರಣೆ ಶುರುವಾಯ್ತು.

" ಮುಲ್ಕೀ ಕ್ಲಾಸಿನ ಹುಡುಗರೆಲ್ಲಾ ಇಲ್ಲಿ ಬರ್ರೋ " ಎಂದರು ಮಾಸ್ತರರು.

ಒಬ್ಬರ ಮುಖ ಒಬ್ಬರು ನೋಡುತ್ತಾ, ಕಳ್ಳರಂತೆ ಹಳ್ಳಹುಳ್ಳಗೆ ಮಾಡುತ್ತ ಬಂದು ನಿಂತರು.

" ನಿನ್ನೆ ರಾತ್ರಿ ನಾನು ಮಲಗಿಕೊಂಡ ಮೇಲೆ ನೀವು ಈ ಸಂಕ್ರಾನ ಹಿತ್ಲಿಗೆ ಬೊಂಡಗಾಯು ಕಳಲಿಕ್ಕೆ ಹೋಗಿದ್ರಂತೆ. ಯಾರ ಯಾರ ಹೋಗಿದ್ರಿ ಹೇಳಿ. ಖರೇ ಹೇಳಿ. ಕಡೇಗೆ ನನಗೆ ಶಿಟ್ಟ ಬಂದ ಮೇಲೆ ಯೇನ ಮಾಡ್ತೆ ಹೇಳ್ಲಿಕ್ ಸಾಧ್ಯ ಇಲ್ಲ. ಮುಲ್ಕೀ ಕಲಿಯುವ ಹದಿನಾರು ಹದಿನೇಳು ವರುಷದ ದಾಂಡಿಗರಾಗಿ ಬಿನ್ನತ್ತೆ ಹುಡುಗ್ರ ಮಾಡದ್ಹಾಂಗ ಮಾಡತ್ರಿ. ಮದ್ವೆ ಯಾದ್ರೆ ಒಬ್ಬೊಬ್ಬಗೆ ನಾಲ್ಕು ಮಕ್ಕಳಾಗತಿದ್ರು " ಎನ್ನುತ್ತಾ ಮಾಸ್ತರರು ಒಳ್ಳೇ ಜಬರ್ಸಿಂದ ಚಡಿಯನ್ನು ತೆಗೆದು ಅಪ್ಪಳಿಸಿದರು.

ಮದುವೆ-ಮಕ್ಕಳು ಎಂದು ಕೇಳಿದ ಕೂಡಲೇ ದತ್ತಭಟ್ಟ ನಗು ತಡೆಯ ಲಾರದೆ ಗೊಳ್ಳಗೆ ನಕ್ಕುಬಿಟ್ಟ. ಅವನ ನಗೆಯಿಂದ ಉಳಿದವರಿಗೂ ನಗು ಬಂದು ಹೋಯಿತು.

“ ಥೂ ಕತ್ತೆಗಳ್ರಾ, ನಜ್ಜು ನಾಚಗೆಯಿಲ್ಲದೆ ನಗೆಯಾಡತ್ರಿ. ನಗೆ
ಯಾಡ್ಸಕೊಡ್ತೆ–ಹೂಂ. ಹೇಳಿ” ಎನ್ನುತ್ತಾ ಅಪರಾಧಿ, ನಿರಪರಾಧಿ ಎನ್ನದೆ
ಎಲ್ಲರಿಗೂ ಒಂದು ಸಲ ಕೈಬೆಚ್ಚಗೆ ಮಾಡಿದರು.

ಜಟ್ಟುಬೀರ ಸುಂಕ್ರುನ ಮನೆ ಹತ್ತಿರವೇ ಇರುತ್ತಿದ್ದ. “ ನೀ ಹೇಳ್ದ್ರೆ
ನಿನಗೆ ಹೊಡಸೂದಿಲ್ಲ. ಖರೇ ಹೇಳು ” ಎಂದ ಸಂಕ್ರೂ, ಅವನ ಹತ್ತಿರ.
ಜಟ್ಟು ಬೀರ ಮಾಪುಕ್ಕಸ್ವಭಾವದವ. ಮಾಸ್ತರ ಚಿತ್ರ ನೋಡಿ ಅವನ ಕೈ-
ಕಾಲೇ ನಡುಗಿಹೋಯಿತು. ಅವನೇ ನಿನ್ನಿನ ಹುಳುಕೆಲ್ಲಾ ಹೊರಗೆ ಹಾಕಿ
ಬಿಟ್ಟ.

ಇನ್ನು ಮುಂದೆ ಮಾಡುವದಿಲ್ಲ—ತಪ್ಪಾಯಿತು ಎಂದು ಎಲ್ಲರ ಹತ್ತರ
ಹೇಳಿಸಿಯಾಯಿತು. ಆದರೆ ಎಲ್ಲರನ್ನು ಅಲ್ಲಿಗೆ ಕರೆದೊಯ್ದುವ, ಮರಹತ್ತಿ
ದವ ಲಕ್ಕಣ್ಣನಾದುದರಿಂದ ಅವನಿಗೆ ಬೆಂಚಿನ ಮೇಲೆ ಶಾಲೆ ಬಿಡುವ ವರೆಗೆ
ಬಗ್ಗಿ ನಿಲ್ಲುವ ಶಿಕ್ಷೆಯಾಯಿತು.

“ ಮಾಸ್ತರೆ, ನಿಮ್ಮ ಮಕಾ ನೋಡಿ ಸುಮ್ಮ ಉಳಿದೀದೆ ಇನ್ನೊಂದ್
ಸರ್ತಿ ಕಾಲಿಟ್ರೆ ಮರಕ್ಕೆ ಬಿಗದ ಹಾಕಕೂಡ್ಸತೆ ” ಎಂದು ಹೇಳಿ ಲಕ್ಕಣ್ಣನನ್ನು
ಗುರುಗುರು ನೋಡುತ್ತಾ ಹೊರಟು ಹೋದ.

ಅತ್ತ ಬೊಂಡಗಾಯ ತಿಂದದ್ದರಲ್ಲೂ ಇಲ್ಲ--ಅನ್ಯಾಯವಾಗಿ ತನಗೆ
ಶಿಕ್ಷೆ ಬಂತಲ್ಲಾ ಎಂದು ಲಕ್ಕಣ್ಣ ಪರಿತಪಿಸಿದ. ತಾನೊಬ್ಬನೇ ಅಲ್ಲಿ ಹೋದ
ವನೆ, ವಾಚಭಟ್ಟ–ದತ್ತಭಟ್ಟ ಇವರನ್ನೂ ನಿಲ್ಲಿಸಿದ್ರೆ ಏನಾಗಿತ್ತು ಈ ಮಾಸ್ತ
ರರಿಗೆ ಎಂದು ಮಾಸ್ತರರ ಮೇಲೆ ಎಲ್ಲಿಲ್ಲದ ಸಿಟ್ಟು ಬಂತು. ಅವನು
ಏನನ್ನೋ ಯೋಚಿಸಿದ.

ಮಧ್ಯಾಹ್ನ ಎಲ್ಲರಿಗಿಂತ ಮುಂಚೆ ಬಂದು ಲಕ್ಕಣ್ಣ ಮೆಲ್ಲನೆ ಶಾಲೆಯ
ಹಿಂದಿನ ಕಡಕಿಯ ಬಾಗಿಲು ತೆಗೆದು ಒಳಗೆ ಬಂದ. ಕುರ್ಚಿಯಮೇಲೆಲ್ಲ
‘ ಸೊಣಗೆ ’ ಯನ್ನು ಕುಡುಗಿ ಮತ್ತೆ ಬಾಗಿಲನ್ನು ಎರಯಿಸಿಕೊಂಡು ಮನೆಗೆ
ಬಂದು ಜ್ವರ ಎಂದು ಹೇಳಿ ಮಲಗಿಬಿಟ್ಟ.

ಎಂದಿನಂತೆ ಮಾಸ್ತರು ಬಂದು ಖುರ್ಚಿಯ ಮೇಲೆ ಕುಳಿತರು. ಕುಳಿ
ತವರು ಒಮ್ಮೆಲೇ ಧಿಮಿ, ಧಿಮಿ ಎಂದು ಕುಣಿಯಹತ್ತಿದರು. ಇವರಿಗೆ ಏನಾ

ಯಿತೆಂದು ಹುಡುಗರಿಗೆ ತಿಳಿಯಲಿಲ್ಲ. ಅವರಿಗೆ ನಗು ತಡೆದುಕೊಳ್ಳಲಾಗ ಲಿಲ್ಲ. ಆದರೂ ನಕ್ಕರೆ ಹೊಡತ ಬಿದ್ದೀತೆಂದು ಪುಸ್ತಕ ಮುಂದೆ ಹಿಡಿದು ಕೊಂಡು ನಗಹತ್ತಿದರು. ಉರಿ ತಡೆಯಲಾರದೆ ಮಾಸ್ತರರು ಅಂಗಿಯನ್ನು ತೆಗೆದೊಗೆದರು. ಹುಡುಗನೊಬ್ಬನು ಆಚೆ ಈಚೆ ಬಿದ್ದ ಸೊಣಗೆ ಸುಂಗನ್ನು ನೋಡಿ, ಮೈಗೆ ಎಣ್ಣೆ ಸವರಿ ಕಂಬಳಿಯಿಂದ ತಿಕ್ಕಹತ್ತಿದ. ಆಗ ಸ್ವಲ್ಪ ತಾಪ ಗುಣವಾಯಿತು. ಹುಡುಗರು ದೇವರಾಣೆಯಾಗಿಯೂ ತಾವು ಮಾಡಿಲ್ಲವೆಂದು ಆಣೆ ಮಾಡಿದರು. ಬಗ್ಗಿ ನಿಲ್ಲಿಸಿದ್ದಕ್ಕೆ ಲಕ್ಕಣ್ಣನೇ ಹೀಗೆ ಮಾಡಿರಬೇಕೆಂದು ಮಾಸ್ತರರಿಗೆನಿಸಿತು. ಆದರೆ ಲಕ್ಕಣ್ಣ ಶಾಲೆಗೇ ಬಂದಿರಲಿಲ್ಲ. “ ಹೋಗೋ ಆ ಲಕ್ಕಣ್ಣನ ಅಪ್ಪನ ಕರೆದುಕೊಂಡು ಬಾರೋ ” ಎಂದು ಮಾಸ್ತರರು ಲಕ್ಕ ಣ್ಣನ ಮನೆಗೆ ಇಬ್ಬರು ಹುಡುಗರನ್ನು ಅಟ್ಟಿದರು.

ಇಷ್ಟೇನು ಅರ್ಜಂಟ ಕರೆ ಬಂತಪ್ಪಾ ಎಂದುಕೊಂಡು ಲಕ್ಕಣ್ಣನ ಅಪ್ಪ ಉಟ್ಟ ವಸ್ತ್ರದಲ್ಲೇ ಶಾಲೆಗೆ ಹೊರಟರು. ಮಾಸ್ತರರು ಆದದ್ದನ್ನೆಲ್ಲಾ ಹೇಳಿ ಬಗ್ಗಿ ನಿಲ್ಲಿಸಿದ್ದಕ್ಕೆ ಅವನೇ ಸೊಣಗೆ ಕುಡುಗಿರಬೇಕೆಂದು ತಿಳಿಸಿದರು.

“ ಅತೋ ಯಮ್ಮನೆ ಮಾಣಿ ಜ್ವರಬಂದು ಮನೇಲಿ ಇದ್ದ. ಎಲ್ಲೂ ಹೆರಗೇ ಬಿಜ್ಜನಿಲ್ಲೆ. ಹೀಂಗಿರತ ಅವ ಇಲ್ಲಿ ಬಂದು ಸೊಣಗೆ ಕುಡಗಿದ್ದ ಎಂದ್ರ ನ್ಯಾಂ ಎಂತ ಹೇಳ್ಲೀ ” ಎಂದ ಲಕ್ಕಣ್ಣನ ಅಪ್ಪ. ಅವರು ಖರೇ ಬ್ರಾಹ್ಮಣ ಎಂದು ಊರಿಗೆ ಊರೇ ಹೇಳುವಾಗ ಮತ್ತೇನು ಹೇಳುವದಿದೆ ?

ಆದರೆ ಮಾಸ್ತರ್ರಿಗೆ ಮಾತ್ರ ಇದು ಲಕ್ಕಣ್ಣನದಲ್ಲದೆ ಬೇರೆಯಾರದೂ ಅಲ್ಲವೆಂದು ಖಾತ್ರಿಯಾಗಿ ಹೋಗಿತ್ತು. ಆದರೆ ಮಾಡುವದೇನು ? ಹೇಗೆ ಮಾಡಿದರೂ ಅವನ ಅಪರಾಧ ಸಿದ್ಧವಾಗುತ್ತಿರಲಿಲ್ಲ. ಮತ್ತೆ ಜೋರು ಮಾಡಲು ಹೋಗುವಾ ಎಂದರೆ ಅವನ ಅಪ್ಪ ಬೇರೆ ಅವನ ಪರವಾಗಿ ಹೇಳಿ ದ್ದಾನೆ. ಏನು ಮಾಡುವದು ಎಂದು ತಿಳಿಯದೆ ಅಣ್ಣಯ್ಯಮಾಸ್ತರ್ರು ಲಕ್ಕ ಣ್ಣನ ಮೇಲಿನ ಸಿಟ್ಟನ್ನು ಉಳಿದ ಹುಡುಗರಿಗೆ ಒಂದೊಂದು ಕೊಟ್ಟು ತೀರಿಸಿ ಕೊಂಡರು.

ಸಂಜೆ ಶಾಲೆ ಬಿಟ್ಟಮೇಲೆ ಲಕ್ಕಣ್ಣ ದತ್ತಭಟ್ಟನ ಹತ್ತಿರ ಬಂದ; ಎಲ್ಲಾ ತಿಳಿದುಕೊಂಡು 'ಬದುಕಿದೆ ಬಡಜೀವವೇ' ಎಂದುಕೊಂಡ. ಮಾಸ್ತರರು ಲಕ್ಕಣ್ಣನಿಗೆ ಹೊಡೆಯುವ ಗೋಜಿಗೂ ಹೋಗಲಿಲ್ಲ. ಆದಿನ 'ರಾತ್ರಿಶಾಲೆ' ಸುದ್ದಿಯನ್ನೂ ತೆಗೆಯಲಿಲ್ಲ.

ಆ ಕತೆ ಈಗ ಹಳಸುತ್ತಾ ಬಂದಿದೆ. ಈಗ ಅದೇ ಅಣ್ಣಯ್ಯಮಾಸ್ತರರ ಹುಡುಗಿ ಸಾವಿತ್ರಿಯೊಂದಿಗೆ ಲಕ್ಕಣ್ಣನ ಲಗ್ನನಿಶ್ಚಯವಾಗಿದೆಯೆಂದು ಮೊನ್ನೆಮೊನ್ನೆ ಒಂದು ಸುದ್ದಿ ಕೇಳಿದೆ.

---

# ಗ್ರಹಣಕರಿ



ಗ್ರಹಣವಾದರೂ ಶಂಬಹೆಗ್ಡೆ ಸಮುದ್ರ ಮೀಯಲಿಕ್ಕೆ ಹೋಗಲೇ ಇಲ್ಲ ಮನೆಯಲ್ಲೇ ಅತ್ತಲಾಗಿತ್ತಲಾಗಿ ಸುಳಿದಾಡ ಹತ್ತಿದ. ಯಾರ ಬರವನ್ನೋ ದಾರಿಕಾಯ ಹತ್ತಿದ. ಮನಸ್ಸಿನಲ್ಲಿ ಏನೇನೋ ಕನಸು ಕಟ್ಟುತ್ತಿದ್ದ.

ಬೆಳಗಿನ ಐದು ಘಂಟೆಯಾಗಿರಬೇಕು, ಅಷ್ಟರಲ್ಲಿ ಸೂಡಿಯ ಬೆಳಕು ಕಾಣಿಸಿತು. ಶಂಬಹೆಗ್ಡೆಯ ಮನ ಏನನ್ನೋ ನೆನೆದು ಹುಚ್ಚೆದ್ದು ಕುಣಿಯಿತು. ಮೈರೋಮಾಂಚಿತವಾಯಿತು.

ಬಂದಳು—ಪ್ರತಿನಿತ್ಯದಂತೆ ಭತ್ತಾ ಕೊರಸಲು ಬರುವ ಆ ಹೆಣ್ಣು ಬಂದಳು. ಅವಳನ್ನು ಅಲ್ಲಿ ಬಿಟ್ಟು ಗಂಡಮುಂದೆ ಹೋದ. ಅವಳು ಅಡಕಲನ್ನು ಏರಿಸಲು ಹಿತ್ತಿಲಕಡೆಗೆ ಹೋದಳು. ಬಚ್ಚಲಲ್ಲಿದ್ದ ಅಡಕಲನ್ನು ತಂದು ಒಲೆಯ ಮೇಲಿಟ್ಟು ಬೆಂಕಿ ಮಾಡಲು ಚೂಳಿಯಿಂದ ತೆರಕು ತಂದುಹಾಕಿದಳು.

“ ಏಯ್-ಏ ” ಧ್ವನಿ ಕೇಳಿಸಿತು. ಅವಳು ತಿರುಗಿ ನೋಡಿದಳು. ಶಂಬಹೆಗಡೆ ಬಾಗಿಲಲ್ಲಿ ನಿಂತು ಕರೆಯುತ್ತಿದ್ದ.

“ ಯೆಂತಂಕ್ರಾ ” ಎಂದು ಅಲ್ಲಿಂದಲೇ ಕೇಳಿದಳು ಸುಕ್ರಿ.

“ ಇಲ್ಲಿಬಾ ಹೇಳ್ತೆ ” ಎಂದು ಪುನಃ ಅಂದ ಶಂಬು.

“ ನನ್ಗೆ ಭತ್ತಾ ಕೊರಸಬೇಕು. ನಾಹೇಂಗ ಬರ್‍ಲಿ ” ಎಂದು ಅವನ ಮಾತಿಗೆ ಕಿವಿಗೊಡದೆ, ಭತ್ತ ತಂದು ಹಂಡೆಯಲ್ಲಿ ತುಂಬಿ ಅದಕ್ಕೆ ನೀರು ಹೊಯ್ದಳು. ಬೆಂಕಿ ತರಲು ಕಾಯಸೊಪ್ಪೆಯೊಂದನ್ನು ತೆಗೆದುಕೊಂಡು “ ಬೆಂಕಿ ಕೊಡಿ ಒಡ್ಯಾ ” ಎಂದು ಅವನು ನಿಂತಲ್ಲಿ ಹೋದಳು.

ಕೂಡಲೇ ಶಂಬು ನಡಗುತ್ತಿರುವ ಕೈಗಳಿಂದ ಅವಳ ಕೈಹಿಡಿದ. ಉುಗುಳಿದರೆ ತುಪ್ಪ ಹಾಳಾಗುತ್ತದೆ. ನುಂಗಿದರೆ ಎದೆ ಸುಡುವಂತಾಯಿತು ಅವಳ ಸ್ಥಿತಿ. ಕೂಗಿದರೆ ಒಡೆಯ —ಕೂಗದಿದ್ದರೆ.........ಭಂಗ!

" ಥೂ ನಿನ್ಮನೆ ಹಾಳಾಗ. ಸಾಲ ಕೊಟ್ಟ ಬಡ್ಡಿ ತೆಕಂಬೇಕು ಹೇಳಿ ಮಾಡಿನ್ಯೋ. ಒಡೇನಂತೆ-ಒಡೆಯ ! ನಿನ್ನವನ........ಮಗನೆ " ಎನ್ನುತ್ತ ಅವಳ ಗಂಡ ಓಡಿಬಂದ.

ಶಂಬ ಹೆಗ್ಡೆ ಓಡಿ ಹೋಗಿ ಬಾಗಿಲ ಹಾಕಿಕೊಂಡು ಕುಳಿತ. " ಕುನ್ನಿಯಂತವ್ರು; ಜಾತಿನೀತಿಯೆಲ್ಲಾ ಹೋತು; ಗ್ರಾಣಕಾಲ ಹೇಳೂದೂ ಇಲ್ಲ. ಯಾಕಾದ್ರೂ ಬಿರಾಮಣ ಆಗವ್ರ್ಯೋ ಏನೋ " ಎಂದು ಶಂಬುನಿಗೆ ಕೇಳುವಂತೆ ಗಟ್ಟಿಯಾಗಿ ನುಡಿದಳು.

ಅಂದಿನಿಂದ ಎಲ್ಲರೂ ಶಂಬ ಹೆಗಡೆಗೆ " ಗ್ರಹಣಕರಿ " ಅನ್ನುವ ಅನ್ವರ್ಥಕನಾಮದಿಂದಲೇ ಕರೆಯತೊಡಗಿದ್ದಾರೆ.

---

# ಕಡಲಿನಲ್ಲಿ !



ಗಡಿಹಿಡಿಯುವ ಸಮಯ. ಕಡಲಿನಲ್ಲಿ ತುಫಾನವೆದ್ದು ಕಡಲಬಣ್ಣ ಬದಲಿಸಿಹೋಗಿತ್ತು. ಹಾರಕಲ್ಲಿನ ಹತ್ತರ ಹಡಗವೊಂದು ಬಂದು ನಿಂತಿತ್ತು. ದಿನವಿಡೀ ನಿಂತಲ್ಲೇ ನಿಂತಿತ್ತು. ಅಂಬಿಗರಿಗೆಲ್ಲ ಆಶ್ಚರ್ಯವಾಯಿತು. ವನ್ನಳ್ಳಿ ನಾಗಪ್ಪ ಗಟ್ಟಿಗರಾಗಿದ್ದ ತನ್ನ ಓರಿಗೆಯವರಿಬ್ಬರನ್ನು ಕಟ್ಟಿಕೊಂಡು ತನ್ನ 'ಕೊಂತ್ಲ'ದಲ್ಲಿ ಕುಳಿತು ಅತ್ತ ಧಾವಿಸಿದ. ಹಡಗಕಲ್ಲಿಗೆ ಸಿಕ್ಕಿನಿಂತಿತ್ತು. ನಾಗಪ್ಪ ಧೈರ್ಯದಿಂದ ಹಡಗವನ್ನು ಸಾಕಷ್ಟು ಪರೀಕ್ಷಿಸಿ ಒಳಗೆ ಯಾರೂ ಇಲ್ಲವೆಂಬುದನ್ನರಿತುಕೊಂಡ. ಚುಕ್ಕಾಣಿ ಮುರಿದುಹೋಗಿತ್ತು. ಹಡಗದ ಸಣ್ಣ ಒಡಕಲಿನಿಂದ ನೀರು ಏರಲು ಆರಂಭವಾಗಿತ್ತು. ಹಡಗಿನ ಹಾಯ ಗಂಬದ ಮೇಲಿದ್ದ ಕರಿಯ ಬೆಕ್ಕು ಮಾತ್ರ ಇವರನ್ನು ನೋಡಿ ಗುರ್‌ಗುಟ್ಟಿತು. ಹಡಗಿನ ತುಂಬಾ ಬೆಲೆಯುಳ್ಳ ವಸ್ತ್ರಗಳಿದ್ದವು. ನಾಗಪ್ಪ ತಡಮಾಡದೆ ಕೈಗೆ ಸಿಕ್ಕಷ್ಟು ಬಟ್ಟೆ ತುರಕಿಕೊಂಡು ಬಂದ. ಯಾರಿಗೂ ಗೊತ್ತಾಗಬಾರದೆಂದು ವಿಶ್ವಪ್ರಯತ್ನ ಮಾಡಿದರೂ ಸಾಧ್ಯವಾಗಲಿಲ್ಲ. ಅಂಬೀರ ಮಕ್ಕಳು ರಾತ್ರೋ ರಾತ್ರಿ ದೋಣಿ ತೆಗೆದುಕೊಂಡು ಹೋಗಿ ಸಾಕಷ್ಟು ಬರಗಿಕೊಂಡು ಬರಲು ಆರಂಭಿಸಿದರು. ದಿಕ್ಕಿಲ್ಲದ ಹಡಗ ಬಂದು ನಿಂತಿದ್ದು ಊರಿನವರಿಗೂ ಗೊತ್ತಾ ಯಿತು. ಎಲ್ಲರೂ ಸಮುದ್ರಬೇಲೆಯ ಮೇಲೆ ನೆರೆದರು. ಅಲ್ಲಿಂದ ಹೋಗಿ ಬಟ್ಟೆ ತಂದರೂ ಸಹ ಇಲ್ಲಿ ಬರುತ್ತಲೇ ಕಸಿದುಕೊಂಡು ಹೋಗಲೂ ಸುರು ವಾಯಿತು.

ಪಾಪ! ವೆಂಕಪ್ಪ ಹೆಗಡೆ ಬಟ್ಟೆಯ ಆಸೆಯಿಂದ ಕೈಯಲ್ಲಿ ಜೀವ ಹಿಡಿದುಕೊಂಡು ಅಲ್ಲಿ ಹೋಗಿ ಕಂಕಳಲ್ಲಿ ಒಳ್ಳೇ ಜರೀ ಸೀರೆಯನ್ನು ತೆಗೆದು ಕೊಂಡು ಬಂದ. "ವಂದ್ನಾ ಸೀರೆ ತಂದ್ಕೊಡಿ" ಎಂದು ಹೆಂಡತಿ ಎಷ್ಟು ವರಾತಾ ಮಾಡಿದರೂ "ದುಡ್ಡಿಲ್ಲೆ" ಹೇಳಿ ತಪ್ಪಿಸಿಕೊಂಡು ಬಿಡುತ್ತಿದ್ದ.

ಈಗ ಹಣವಿಲ್ಲದೆಯೇ ಭರ್ಜರಿಶೀರೆ ಬಂದ ಹಾಗಾಯಿತು. ಆ ಸೀರೆನೋಡಿ ' ಅವಳು ' ಎಷ್ಟು ಸಂತೋಷಪಡಬಹುದು, ಎನ್ನುವ ಆಲೋಚನೆಯಲ್ಲಿಯೇ ಗುಂಗಾಗಿ ಇದ್ದ ವೆಂಕಪ್ಪನ ಕಂಕುಳದಲ್ಲಿದ್ದ ಸೀರೆಯನ್ನು ಅವನು ದಂಡೆಗೆ ಬರುತ್ತಲೂ ಯಾರೋ ಕಸಿದುಕೊಂಡು ನಡೆದರು

" ಥೂ, ಕಳ್ಳಸುಳೇಮಕ್ಕಳ್ರಾ ಬೇರೆಯವ್ರ ಸಾಮಾನ ತೆಕಂಡ ಹೋಪ್ಲೆ ನಾಚ್ಕೆಬತ್ತಿಲ್ಯೋ ? " ಎಂದು ಗುಡುಗಿದರು. ಆದರೆ ಬೀರ " ಮತ್ತ ಹೆಗಡೇರ ನೀವ ತಂವದ್ದ ಯಾರದ್ದು ? " ಎಂದು ಕೇಳಿದಾಗ ಮಾತ್ರ ನಾಚಿಕೆಯಿಂದ ತಲೆತಗ್ಗಿಸಬೇಕಾಯಿತು.

ಹೀಗೆ ಊರಿಗೆ ಊರೇ ಬಟ್ಟೆಯ ಬೇಟೆ ಆರಂಭಿಸಿದಾಗ ದತ್ತಣ್ಣ ಸುಮ್ಮಸಿರಲು ಸಾಧ್ಯವೇ ? ವನ್ನಳ್ಳಿ ನಾಗಪ್ಪನ ವಶೀಲಿ ಹಚ್ಚಿ ಅವನ ದೋಣಿಯಲ್ಲಿ ತಾನೂ ಹೊರಟ ಹದಿನೆಂಟು ವರುಷದ ಪೋರನಾದರೂ ಅವನಲ್ಲಿ ಯಾರಿಗೂ ಇಲ್ಲದ ಧೈರ್ಯ! ಹಾರಲ್ಲಿನ ಹತ್ತಿರ ದೋಣಿ ಬಂದು ನಿಲ್ಲುವದೇ ತಡ ಉಳಿದವರ ಸಂಗಡ ದತ್ತಣ್ಣನೂ ಒಳಗೆ ನುಗ್ಗಿದ. ಅಲ್ಲಿನ ಬಟ್ಟೆಯನ್ನು ನೋಡಿ ಆತ ಬೆರಗಾಗಿ ಹೋದ. ಯಾವದನ್ನು ತೆಗೆದುಕೊಳ್ಳಲಿ ಎಂದು ಹುಡುಕುತ್ತಿರುವಾಗ ಕೆಳಗಿನ ಅಂತಸ್ತಿನಲ್ಲಿದ್ದ ತ್ರಿಜೂರಿ ಅವನಿಗೆ ಗೋಚರಿಸಿತು. ಆದರೆ ಒಬ್ಬನೇ ತರಲು ಹೇಗೆ ಸಾಧ್ಯ? ಒಬ್ಬನಲ್ಲ—ಉಳಿದ ನಾಲ್ವರು ಕೂಡಿದರೂ ಸಾಧ್ಯವಾಗಲಿಲ್ಲ. ಅಷ್ಟರಲ್ಲಿ ಸಮುದ್ರದ ನೀರು ' ಭೋಸೋಲ್ ' ಎಂದು ಮೇಲಿನಿಂದ ಬಂದುಬಿತ್ತು. ಇನ್ನು ಅಲ್ಲಿ ನಿಲ್ಲುವದು ಅಪಾಯವೆಂದು ತಿಳಿದ ನಾಗಪ್ಪ " ನಾವಿಲ್ಲಿದ್ರೆ ಸಾವೂದೆಯ. ಜೀವಗನಾಕಿದ್ರೆ ಎಲ್ಲಾದ್ರೂ ದುಡ್ಕಂಡಾದ್ರು ತಿಂಬೊ. ಬಿರೀನ ಇಲ್ಲಿಂದ ತಪ್ಪಕಂಡು ಹೋಗ್ವನಿ " ಎಂದು ಹೇಳಿ ಕೈಗೆ ಸಿಕ್ಕಷ್ಟನ್ನೇ ಬಾಚಿಕೊಂಡು ಮೇಲೆ ಹೊರಟ. ದತ್ತಣ್ಣನೊಬ್ಬನೇ ಹಿಂದುಳಿದ. ಅಷ್ಟರಲ್ಲಿ ಮತ್ತೆ " ಭೋಸೋಲ್" ಎಂದು ನೀರು ಬಿತ್ತು. ಯಾವದೋ ಹಲಗೆ ' ಧಪ್ ' ಎಂದು ಬಂದು ದತ್ತಣ್ಣನ ತಲೆಗೆ ಬಡಿಯಿತು. " ಅಯ್ಯಯ್ಯೋ ಸತ್ತನಲ್ರೋ " ಅನ್ನುವ ಚೀತ್ಕಾರ ಕೇಳಿಬಂತು.

" ಅಯ್ಯಯ್ಯೋ ಕೊಸಾ ವಡೀದೀರ ಬೊಬ್ಬೆ ಎಂತಕ್ಕೆ ಹೊಡಿತರೊ " ಎಂದು ಕೂಗಿ ಗಡಬಡಿಸುತ್ತಾ ನಾಗಪ್ಪ ತಡಮಾಡದೆ ಕೆಳಗಿಳಿದ. ದತ್ತಣ್ಣ

ಅದ್ದಿ ಮುದ್ದೆಯಾಗಿದ್ದ. ಕೈಗೆ ಸಿಕ್ಕ ಯಾವದೋ ವಸ್ತುವನ್ನು ಅತಿಪ್ರಯಾಸ ದಿಂದ ಹಿಡಿದುಕೊಂಡಿದ್ದ. ನಾಗಪ್ಪ ಅವನನ್ನೆತ್ತಿಕೊಂಡು ಬಂದು ದೋಣಿ ಯಲ್ಲಿ ಮಲಗಿಸಿದ. ದಂಡೆಗೆ ಬರುತ್ತಲೇ ಜನರಲ್ಲಿ ಹಾಹಾಕಾರವುಂಟಾ ಯಿತು. ದತ್ತಣ್ಣನ ಅಪ್ಪ 'ಅಯ್ಯೋ ಮಗನೇ' ಎಂದು ತಲೆ ತಲೆ ಬಡಿದು ಕೊಳ್ಳುತ್ತಾ ಓಡಿ ಬಂದ. ಆದರೂ "ಯೆನಗೆ ಹೇಳ ಹೇಳ ಸಾಕಾತು. ಪರರದಕ್ಕೆ ಆಶೆ ಮಾಡಬಾರ ಹೇಳಿ. ಆದರೆ ಯಂಗಳಂತವು ಹೇಳಿದ್ರೆ ಕೇಳತ್ವಾ" ಎಂದು ದತ್ತನ ಅಪ್ಪ ಕೊರಗುಟ್ಟದೆ ಹೋಗಲಿಲ್ಲ.

ಎಚ್ಚರವಿಲ್ಲದೆ ಮಲಗಿದ್ದ ದತ್ತಣ್ಣನಿಗೆ ಬೆಳಿಗ್ಗೆ ಎಚ್ಚರವಾದಾಗ ಕಿವಿಗೆ ಬಿದ್ದುದು ನಿನ್ನಿನಂತೆಯೇ ಗದ್ದಲ! ಮೆಲ್ಲನೆ ಹತ್ತಿರವಿದ್ದ ಅಪ್ಪನಿಗೆ "ಅದ್ಯೆಂತಾ ಗೌಜಿ" ಎಂದು ಕೇಳಿದ.

"ಆ ಸುಡಗಾಡ ಹಡಗ ಯೆಳೇಸಕಂಡ ಹೋಪ್ಲ ಹಣಕಿದ್ವಕು." ಎಂದು ಅಪ್ಪ ಹೇಳಿದ.

ದತ್ತಣ್ಣ ನಿಟ್ಟುಸುರೊಂದನ್ನು ಬಿಟ್ಟು, ಅತಿ ಪ್ರಯಾಸದಿಂದ ಮತ್ತೊಂದು ಮಗ್ಗಲಿಗೆ ಹೊರಳಿದ.

---

